# ಅಧ್ಯಾತ್ಮಪ್ರಕಾಶ

'एतज्ज्ञेयं नित्यमेवाऽऽत्मसंस्थं नातःपरं वेदितव्यं हि किञ्चित्'

ಸಂಪುಟ ೫೧ ಫೆಬ್ರವರಿ ೧೯೮೨ ಸಂಚಿಕೆ ೬

## ವಿಷಯಗಳು



ಪತ್ರಿಕೆಯ ಚಂದಾ

ರೂ. ೧೦-೦೦

ಪೋಷಕರಿಗೆ ರೂ. ೧೫-೦೦

ಮಹಾಪೋಷಕರಿಗೆ ರೂ. ೧೦೧—

ಮತ್ತು ಮೇಲೆ



ಪತ್ರಿಕೆಗೆ ಚಂದಾಹಣವನ್ನು ಈಗಲೇ ಕಳುಹಿಸಿರಿ.

ಪತ್ರಿಕೆಯ ಸಂಪಾದಕ ಮತ್ತು ಪ್ರಕಾಶಕ :
ಅಧ್ಯಾತ್ಮವಿದ್ಯಾಪ್ರವೀಣ ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿ,
ಅಧ್ಯಾತ್ಮಪ್ರಕಾಶಕಾರ್ಯಾಲಯ, ಹೊಳೆನರಸೀಪುರ-573211

February 1982

# ಕಾರ್ಯಾಲಯದ ಸುದ್ದಿ

**ಪತ್ರಿಕೆ :** ಪತ್ರಿಕೆಯ ಸಂಚಿಕೆಗಳು ವಿಳಂಬವಾಗಿ ತಲುಪುತ್ತಿವೆ – ಎಂದು ಗ್ರಾಹಕರು ತಿಳಿಸುತ್ತಲೇ ಇದ್ದಾರೆ. ನಾವು ಎಂದಿನಂತೆ ಪ್ರತಿ ತಿಂಗಳ 5 ನೆಯ ತಾರೀಖಿನಂದೇ ಅಂಚೆಗೆ ಕೊಡುತ್ತಿದ್ದೇವೆ. ಗ್ರಾಹಕರು ನಮ್ಮೊಡನೆ ಸಹಕರಿಸ ಬೇಕಾಗಿ ಪ್ರಾರ್ಥನೆ.

**ಪುರಾಣ :** ಶ್ರೀಮದ್ಭಾಗವತ ಮಹಾಪುರಾಣದಲ್ಲಿ ದಶಮಸ್ಕಂಧ ೫೩ ಅಧ್ಯಾಯಗಳಾಗಿವೆ.

**ಅನುಷ್ಠಾನ :** ಪ್ರಕಟಿಸಿದ್ದ ಕಾರ್ಯಕ್ರಮದಂತೆ ಗೀತಾಜಯಂತೀ- ಬ್ರಹ್ಮ ಚೈತನ್ಯಾರಾಧನೆಗಳು ಸಾಂಗವಾಗಿ ನೆರವೇರಿರುತ್ತವೆ.

**ಗ್ರಂಥಮುದ್ರಣ :** ಬ್ರಹ್ಮಸೂತ್ರಭಾಷ್ಯ – ಮುದ್ರಣವು ಮುಂದುವರೆಯು ತ್ತಿದೆ. ಉಳಿದ ಪ್ರಕಟನೆಗಳ ಕಾರ್ಯವೂ ಪ್ರಗತಿಯ ಹಾದಿಯಲ್ಲಿದೆ. ಕೆಲಸಗಾರರ ಕೊರತೆಯಿಂದ ನಿರೀಕ್ಷಿಸಿದಷ್ಟು ಅಭಿವೃದ್ಧಿಯು ಆಗುತ್ತಿಲ್ಲ.

**ಸಂಪಾದಕರು :** 1982 ನೇ ಜನವರಿ ಮಾಹೆಯಲ್ಲಿ ಸಂಪಾದಕರು ಚಿಕ್ಕ ಮಗಳೂರಿನಲ್ಲಿ ನಡೆದ ದಕ್ಷಿಣವಲಯ ದಿವ್ಯಜೀವನಸಮ್ಮೇಳನದಲ್ಲಿ ಮೂರು ದಿನಗಳ ಕಾಲ ಭಾಗವಹಿಸಿದ್ದರು.

**ಅನುತಾಪ :** ಕಾರ್ಯಾಲಯದ ಕಾರ್ಯಕಾರಿಸಮಿತಿಯ ಮಾಜಿ ಸದಸ್ಯರೂ ಹೊಳೆನರಸೀಪುರದ ವೃದ್ಧಪಿತಾಮಹರೆನಿಸಿ ಜನಪ್ರಿಯರೂ ಆಗಿದ್ದ ಶ್ರೀ ಛತ್ರದ ವೈ. ರಾಮಚಂದ್ರರಾಯರು ತಾ|| 7-1-1982 ನೇ ಗುರುವಾರ ನಿಧನರಾದರೆಂತ ತಿಳಿ ಸಲು ವಿಷಾದಿಸುತ್ತೇವೆ. ದಿವಂಗತರ ಗೌರವಾರ್ಥವಾಗಿ 13-1-1982 ರಂದು ಸ್ಥಳೀಯ ಶಂಕರಜಗದ್ಗುರುಸೇವಾಸಂಘದ ಆವರಣದಲ್ಲಿ ಸಂತಾಪಸೂಚಕಸಭೆ ಯನ್ನು ಏರ್ಪಡಿಸಲಾಗಿತ್ತು. ಉಭಯಸಂಸ್ಥೆಗಳ ಪರವಾಗಿ ಹಾಗೂ ನಾಗರಿಕರ ಪರವಾಗಿ ದಿವಂಗತರಿಗೆ ಶ್ರದ್ಧಾಂಜಲಿಯನ್ನರ್ಪಿಸಲಾಯಿತು.

**ಋಷಿಸಂಸ್ಕೃತಿವಿದ್ಯಾಕೇಂದ್ರ :** ಬೆಂಗಳೂರಿನಲ್ಲಿರುವ ಈ ಸಂಸ್ಥೆಯ ಮುಖ್ಯ ಸಂಚಾಲಕರಾದ ಶ್ರೀ ಋಷಿ ಪ್ರಭಾಕರ-ರವರು ತಾ|| 30-12-81 ನೆಯ ಬುಧವಾರ ಕಾರ್ಯಾಲಯಕ್ಕೆ ದಯಮಾಡಿಸಿ 'ಸಿದ್ಧಸಮಾಧಿಯೋಗ'ದ ವಿಷಯ ವಾಗಿ ಉಪನ್ಯಾಸ ಮಾಡಿದರು. ಆಸಕ್ತ ಭಕ್ತಮಹನೀಯರುಗಳು ಇದರ ಲಾಭವನ್ನು ಪಡೆದರು.

**ದಿವ್ಯಜೀವನ ಸಮ್ಮೇಳನ :** ಚಿಕ್ಕಮಗಳೂರಿನಲ್ಲಿ 7—1—1982ರಿಂದ ಮೂರು ದಿನಗಳ ಕಾಲ ನಡೆದ ಈ ದಿವ್ಯಸಮ್ಮೇಳನವು ನಿಜವಾಗಿಯೂ ಅನ್ವರ್ಥ ವಾಗಿತ್ತು. ಪೂಜೆ, ತೀರ್ಥ, ಪ್ರಸಾದಗಳ ಗದ್ದಲವಿಲ್ಲದೆ ಪ್ರಾರ್ಥನೆ, ಧ್ಯಾನ, ಭಜನೆ, ಸತ್ಸಂಗ, ಪ್ರವಚನ, ಯೋಗಾಸನಾದಿ ಅಂತರಂಗಸಾಧನಗಳೇ ಸರ್ವಸ್ವ ವಾಗಿದ್ದ ಈ ಸಮ್ಮೇಳನವು ಮುಮುಕ್ಷುಗಳಿಗೂ ಅಧ್ಯಾತ್ಮಚಿಂತಕರಿಗೂ ರಸದೌತಣ ವಾಗಿತ್ತು. ಸಮಾರಂಭದ ಮುಖ್ಯ ವ್ಯಕ್ತಿಗಳಾಗಿದ್ದ ಅಖಿಲಭಾರತ ದಿವ್ಯಜೀವನ

(ಮರೆಹಾಳೆಯ ಮೂರನೆಯ ಪುಟವನ್ನು ನೋಡಿ)

|| ಓಂ ||

# ಅಧ್ಯಾತ್ಮಪ್ರಕಾಶ

ಸಂಪುಟ ೫೧] ವರ್ಷಕ್ಕೆ ರೂ. ೧೦-೦೦ ; ಬಿಡಿ ಸಂಚಿಕೆಗೆ : ೧ ರೂ. [ಸಂಚಿಕೆ ೬

ಫೆಬ್ರುವರಿ 1982

( ಶ್ರೀ ದುರ್ಮತಿಸಂವತ್ಸರದ ಮಾಘ )

## ಆದಿತ್ಯಾಂತರ್ಗತಪುರುಷನ ಉಪಾಸನೆ

**ಓಂ|| ಅಥ ಯ ಏಷೋಽನ್ತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ ಹಿರಣ್ಯಶ್ಮಶ್ರುಃ ಹಿರಣ್ಯಕೇಶ ಆ ಪ್ರಣಖಾತ್ ಸರ್ವ ಏವ ಸುವರ್ಣಃ ||**

—ಛಾಂದೋಗ್ಯೋಪನಿಷತ್ತು ೧-೬-೬

**ಭಾವಾರ್ಥ :** ಇನ್ನು ಆದಿತ್ಯನೊಳಗೆ ಈ ಹಿರಣ್ಮಯನಾದ ಪುರುಷನು ಕಾಣಿಸುತ್ತಿರುವನಲ್ಲ, ಹಿರಣ್ಯಶ್ಮಶ್ರುವಾಗಿ, ಹಿರಣ್ಯಕೇಶನಾಗಿ, ಪ್ರಣಖದ ವರೆಗೂ ಎಲ್ಲವೂ ಸುವರ್ಣವೇ ಆಗಿರುವನಲ್ಲ- (ಅವನನ್ನು ಚಿಂತಿಸಬೇಕು).

[ಸೂರ್ಯನೊಳಗೆ ಕಾಣಬರುವ ಚಿನ್ನದಂತೆ ಶರೀರವುಳ್ಳ, ಚೇತನನೂ ಆದ ಪುರುಷನು ಪರಮಪವಿತ್ರನೂ ಸರ್ವಕಾಮಗಳೊಡೆಯನೂ ಸರ್ವಲೋಕಾಧಿಪತಿಯೂ ಪಾಪರಹಿತನೂ ಆಗಿರುವನೆಂದು ಚಿಂತಿಸಬೇಕು. ಇವನೇ ಅಧಿದೈವತನಾದ ಉದ್ಗೀಥದೇವನೆನಿಸಿರುವನು- ಎಂದಭಿಪ್ರಾಯ.]

———

# ಅಧ್ಯಾತ್ಮಸಂದೇಶ

(ಗುರುಕಿಂಕರ)

## ಹಿರಣ್ಮಯಪುರುಷನ ಉಪಾಸನೆ

ಛಾಂದೋಗ್ಯೋಪನಿಷತ್ತಿನಲ್ಲಿ ಓಂಕಾರದ ಉಪಾಸನೆಯನ್ನು ತಿಳಿಸಿದ ಬಳಿಕ ಈಗ ಆದಿತ್ಯೋಪಾಸನೆಯನ್ನು ಪುನಃ ರೂಪಾಂತರದಿಂದ ಹೇಳಲಾರಂಭಿಸಿದ್ದಾರೆ. ಉದ್ಗೀಥೋಪಾಸನಾಪ್ರಕರಣದಲ್ಲಿಯೇ ಈ ವಿಷಯವೂ ಬಂದಿರುವದು. ಏಕೆಂದರೆ ಆದಿತ್ಯನ ಬಿಳುಪಾದ ಕಾಂತಿಯನ್ನು ಋಕ್ ಎಂದೂ ಕಪ್ಪಾದ ಕಲೆಯನ್ನು ಸಾಮವೆಂದೂ ಚಿಂತಿಸಬೇಕೆಂದು ಹಿಂದೆ ವರ್ಣಿಸಿದೆ. ಸೂರ್ಯನಲ್ಲಿ ಕಪ್ಪುಕಾಂತಿಯಿರುವದುಂಟೆ ? ಎಂದರೆ ಚಿತ್ತಸಮಾಧಾನವನ್ನು ಪಡೆದು ಶಾಸ್ತ್ರದೃಷ್ಟಿಯಿಂದ ಚಿಂತಿಸುವವರಿಗೆ ಮಾತ್ರ ಅದು ಕಂಡುಬರುತ್ತದೆ ಎಂದು ಭಾಷ್ಯಕಾರರು ತಿಳಿಸಿರುತ್ತಾರೆ. ಹೀಗೆ ಆದಿತ್ಯೋಪಾಸನೆಯ ಮೂಲಕ ಋಕ್ಸಾಮಗಳನ್ನೂ ಆ ಮೂಲಕ ಉದ್ಗೀಥವನ್ನೂ ಸಂಬಂಧಿಸಿ ಉಪಾಸನೆಗಳನ್ನು ವಿವಿಧವಾಗಿ ಇಲ್ಲಿ ವರ್ಣಿಸಲಾಗಿದೆ. ಈಗ ಆಧಿದೈವಿಕವಾಗಿ ಆದಿತ್ಯನೊಳಗೆ ಅಡಗಿರುವ ಪುರುಷನ ಉಪಾಸನೆಯನ್ನು ಹೇಳುತ್ತಾರೆ. ಅದರ ವಿವರವನ್ನು ನೋಡೋಣ.

ಉಪಾಸನೆಗಳೆಲ್ಲವೂ ಪರಬ್ರಹ್ಮದ ಪ್ರಾಪ್ತಿಗಾಗಿಯೇ ಹೇಳಲ್ಪಟ್ಟಿರುವವು. ಜ್ಞಾನಕ್ಕೂ ಉಪಾಸನೆಗೂ ಭೇದವೇನೆಂದರೆ: ಉಪಾಸನೆಯು ಕರ್ತೃತಂತ್ರವಾಗಿದ್ದು ಮಾನಸಿಕವಾದ ಒಂದು ಕರ್ಮವೇ ಆಗಿರುತ್ತದೆ. ಆದ್ದರಿಂದ ದ್ವೈತದೃಷ್ಟಿಯು ಇಲ್ಲಿ ಅನಿವಾರ್ಯವು. ಶಾಸ್ತ್ರವು ಈ ದ್ವೈತದೃಷ್ಟಿಯನ್ನವಲಂಬಿಸಿ ಸಾಧಕನ ಚಿತ್ತಸಮಾಧಾನಕ್ಕಾಗಿ ಉತ್ಕೃಷ್ಟೋಪಾಧಿಗಳಲ್ಲಿ ಬ್ರಹ್ಮಕ್ಕೆ ರೂಪಾಕಾರಾದಿಗಳನ್ನೂ ಗುಣಮಹಿಮಾದಿಗಳನ್ನೂ ತಾನೇ ಕಲ್ಪಿಸಿಕೊಟ್ಟು ಹಾಗೆಯೇ ಚಿಂತಿಸಬೇಕೆಂದು ಉಪದೇಶಿಸುತ್ತದೆ. ಇಂಥ ಕಲ್ಪನೆಗಳು ಶಾಸ್ತ್ರದ ಆಧಾರದಿಂದಲೇ ಹೊರಟಿರುವದರಿಂದ ಸಾಧಕನಿಗೆ ಮುಂದೆ ಜ್ಞಾನಕ್ಕೆ ಅನುಕೂಲವಾಗಿಯೇ ಇರುತ್ತವೆ. ಹೇಗೆಂದರೆ: ಉತ್ಕೃಷ್ಟೋಪಾಧಿಗಳಲ್ಲಿ ಪರಬ್ರಹ್ಮವನ್ನು ಸಗುಣ-ಸಾಕಾರವಾಗಿ ಚಿಂತಿಸಿದಂತೆಲ್ಲ ಸಾಧಕನು ಅದಕ್ಕೆ ಹತ್ತಿರವಾಗುವನು. ಅವನ ಅಂತಃಕರಣವು ಸೂಕ್ಷ್ಮವಸ್ತುಗ್ರಹಣಕ್ಕೆ ತಕ್ಕದ್ದಾಗುವದು. ಮುಂದೆ ಜ್ಞಾನವು ಸುಲಭವಾಗಿ ದಕ್ಕುವದು. ಆದ್ದರಿಂದ ಆದಿತ್ಯಾಂತರ್ಗತಪುರುಷನ ಉಪಾಸನೆಯೂ ಸಹ ನಮ್ಮೆಲ್ಲರ ದೃಷ್ಟಿಯಿಂದ ಬಹಳ ಮಹತ್ತ್ವವುಳ್ಳದ್ದೂ ಉಪಯುಕ್ತವಾದದ್ದೂ ಆಗಿದೆ. ಆ ಪುರುಷನನ್ನು 'ನಾರಾಯಣ'ನೆಂದು ಉಪನಿಷತ್ತುಗಳಲ್ಲಿಯೂ ಪುರಾಣಗಳಲ್ಲಿಯೂ ಹೆಸರಿಸಿರುತ್ತಾರೆ. ಅವನ ಶರೀರಾದಿಗಳು, ಮಹಿಮೆ- ಮುಂತಾದವುಗಳನ್ನು ಅರಿತು ಚಿಂತಿಸುವದು ಒಂದು ಹೆಚ್ಚಿನ ಸಾಧನೆಯಾಗಿರುವದು. ವೈದಿಕರಿಗಂತೂ ಇದು ಚಿರಪರಿಚಿತವೂ ಪ್ರಿಯವೂ ಆಗಿರುತ್ತದೆ.

ಈಗ ಸೂರ್ಯಾಂತರ್ಗತಪುರುಷನ ವರ್ಣನೆಯನ್ನು ಕೇಳಿರಿ : ಮೊದಲು ಈ ಮಂತ್ರದಲ್ಲಿರುವ ದೃಶ್ಯತೇ (ಕಂಡುಬರುತ್ತಾನೆ) ಎಂಬ ಶಬ್ದವನ್ನು ಚಿಂತಿಸೋಣ. ಸೂರ್ಯನನ್ನು ನಾವು ನೋಡಿದ್ದೇವಾದರೂ ಅವನಲ್ಲಿ ಯಾವ ಪುರುಷನೂ ನಮಗೆ ಕಂಡುಬಂದಿಲ್ಲವಲ್ಲ ? ಎಂದು ಯಾರಾದರೂ ಆಕ್ಷೇಪಿಸಬಹುದು. ಮತ್ತು ಆತನ ಕಿರಣಗಳು ನಮ್ಮ ಕಣ್ಣಿಗೆ ಚುಚ್ಚದಂತೆ ಉಪಾಯವಾಗಿ ಯಂತ್ರಗಳ ಮೂಲಕ ನೋಡುವ ವಿಜ್ಞಾನಿಗಳಿಗೂ ಸಹ ಪುರುಷನ ದರ್ಶನವಾಗಿರಲಾರದು. ಹಾಗಾದರೆ ದೃಶ್ಯತೇ- ಎಂದು ಪ್ರಸಿದ್ಧವಾಗಿರುವಂತೆ ಮಂತ್ರದಲ್ಲಿ ಹೇಳಿದೆಯಲ್ಲ- ಎಂದರೆ ಶ್ರೀ ಶಂಕರಾಚಾರ್ಯರು ಅದನ್ನು ಈ ರೀತಿ ವಿವರಿಸುತ್ತಾರೆ : "ಕಾಣಬರುತ್ತಾನೆ- ಎಂದರೆ ಅಂತರ್ದೃಷ್ಟಿಯಿಂದ ನೋಡುವ ಸ್ವಭಾವವುಳ್ಳ, ಹಾಗೂ ಮನಸ್ಸಿನ ಹೊಯ್ದಾಟವಿಲ್ಲದ, ಮತ್ತು ಬ್ರಹ್ಮಚರ್ಯ, ಶಮದಮಾದಿಗಳಿಂದ ಅಂತಃಕರಣ ವನ್ನು ಸೂಕ್ಷ್ಮವಾಗಿ ಸ್ವಚ್ಛವಾಗಿರಿಸಿಕೊಂಡಿರುವ ಯೋಗಿಗಳಿಗೆ" ಎಂದರ್ಥ. ಆದ್ದರಿಂದ ಪಾಮರರಾದ ಭೌತಿಕದೃಷ್ಟಿಯ ಜನರಿಗೆ ಹಿರಣ್ಮಯಪುರುಷನು ಕಾಣ ಬರುವ ಸಂಭವವಿಲ್ಲ. ಯಾವದೇ ವಸ್ತುವನ್ನಾದರೂ ನೋಡಬೇಕಾದರೆ ಅದಕ್ಕೆ ತಕ್ಕ ಕರಣಗಳು ಬೇಕು. ಸೂಕ್ಷ್ಮವಾದ ದೃಶ್ಯಗಳಾದ ಕ್ರಿಮಿಕೀಟಗಳನ್ನು ಕೂಡ ಸಾಮಾನ್ಯಕಣ್ಣಿನಿಂದ ನೋಡಲಾಗುವದಿಲ್ಲ. ಆದಕ್ಕೆ ಸೂಕ್ಷ್ಮದರ್ಶಕಯಂತ್ರಗಳು ಬೇಕಾಗುವದು. ಹಾಗೆಯೇ ಇಲ್ಲಿಯೂ ಹಿರಣ್ಮಯಪುರುಷನ ದರ್ಶನಕ್ಕೆ ಅಸಾ- ಧಾರಣವಾದ ಕರಣವೇ ಬೇಕಾಗಿರುತ್ತದೆ. ಯಾವನು ಇಂಥ ಸಂಪತ್ತುಳ್ಳವನಾಗಿರು ವನೋ ಅವನಿಗೆ ಆ ಪರಮಪುರುಷನು ಕಂಡುಬರುತ್ತಾನೆ- ಎಂದಭಿಪ್ರಾಯ.

ಈಗ ಹಿರಣ್ಮಯಪುರುಷನ ಸ್ವರೂಪವನ್ನು ತಿಳಿಯೋಣ. ಈತನ ಗಡ್ಡ ಮೀಸೆಗಳೆಲ್ಲವೂ ಹಿರಣ್ಮಯವೇ ಆಗಿರುವವು- ಎಂದು ಉಪನಿಷತ್ತಿನಲ್ಲಿದೆ. ಭಾಷ್ಯ ಕಾರರು ಅರ್ಥಮಾಡುವಾಗ ಇಲ್ಲಿ 'ಮಯ- ಎಂದರೆ ವಿಕಾರವೆಂಬ ಅರ್ಥವನ್ನು ಹೇಳಬಹುದಾದರೂ ಪುರುಷನು ಚೇತನನಾಗಿರುವದರಿಂದ ಚಿನ್ನದಂತೆ ಹೊಳಪಾದ ಹಳದಿಯ ಕಾಂತಿಯುಳ್ಳ ಶರೀರದವನು- ಎಂದೇ ತಿಳಿಯಬೇಕು'- ಎಂಬುದಾಗಿ ಸೂಚಿಸಿದ್ದಾರೆ. ಏಕೆಂದರೆ ಚೇತನನಾದ ಪುರುಷನೊಬ್ಬನಿಗೆ ಚಿನ್ನದ ಗಡ್ಡಮೀಸೆ ಗಳಿರುವದು ಸಂಭವಿಸುವದಿಲ್ಲ. ಇನ್ನು ಈತನು ಉಗುರುತುದಿಗಳವರೆಗೂ ಎಲ್ಲಾ ಶರೀರಾವಯವಗಳಿಂದಲೂ ಸುವರ್ಣವರ್ಣವಾಗಿಯೇ ಇರುತ್ತಾನೆ. ಈತನ ಕಣ್ಣು ಗಳೊ, ಎಂದರೆ ಕಮಲದಂತೆ ನಸುಗೆಂಪಾಗಿರುವವು. ಇವನಿಗೆ 'ಉತ್' ಎಂಬ ಹೆಸರೂ ಇದೆ. ಎಲ್ಲಾ ವಿಧವಾದ ಪಾಪಸಮೂಹಗಳಿಂದಲೂ ಮೇಲೆದ್ದು ಪರಿಶುದ್ಧ ನಾಗಿರುವದರಿಂದ ಈ ಹೆಸರು ಬಂದಿರುವದು. ಇದು ಗೌಣನಾಮವು. ಗೌಣವೆಂದರೆ ಗುಣಗಳ ನಿಮಿತ್ತವಾಗಿ ಬಂದಿರುವ ಹೆಸರು. ಹೇಗೆ ಕೃಷ್ಣನೆಂದರೆ ಕಪ್ಪುವರ್ಣ ದವನೆಂದು ಹೇಳುವರೋ ಹಾಗೆ ಉತ್ ಎಂದರೆ ಉದಿತನು ಎಂದಭಿಪ್ರಾಯ.

ಇನ್ನು ಈ ಹಿರಣ್ಮಯಪುರುಷನ ಮಹಿಮೆಯನ್ನು ವಿಚಾರಮಾಡಬಹುದಾಗಿದೆ. ಇವನಿಗೆ ಋಕ್ಕೂ ಸಾಮಗಳೂ ಗೇಷ್ಣಗಳೆಂದು ತಿಳಿಸಿದೆ. ಆದ್ದರಿಂದ ಉದ್ಗೀಥ

ನೆನಿಸಿರುವ್ವನು. ಇದು ಒಂದುಗುಣವಿಶೇಷವು. ವೇದಗಳೆಂಬಿವು ಪರಮಪವಿತ್ರವಾದ ವಾಙ್ಮಯಗಳು. ಅವೇ ಹಿರಣ್ಮಯಪುರುಷನಿಗೆ ಗೆಣ್ಣುಗಳಾಗಿವೆ. ಆದರೆ ಕೇವಲ ವೇದವಾಙ್ಮಯಗಳು ಮಾತ್ರ ಅವಯವಗಳೆಂದು ಇಲ್ಲಿ ಅಭಿಪ್ರಾಯವಿರುವದಿಲ್ಲ. ಮತ್ತೇನೆಂದರೆ ಋಕ್ ಎಂದರೆ ಪೃಥಿವಿಯೆಂದೂ ಸಾಮವೆಂದರೆ ಅಗ್ನಿಯೆಂದೂ ಹಿಂದೆ ತಿಳಿಸಿರುವಂತೆ ಇಲ್ಲಿಯೂ ಋಕ್ಸಾಮಶಬ್ದಗಳಿಗೆ ಅರ್ಥವನ್ನು ತಿಳಿಯಬೇಕು. ಪೃಥಿವೀ, ಅಗ್ನಿ–ಇತ್ಯಾದಿಲೋಕಗಳೆಲ್ಲವೂ ಗೆಣ್ಣುಗಳ ಸ್ಥಾನದಲ್ಲಿವೆ–ಎಂದು ಭಾವಿಸ ಬೇಕು. ಏಕೆಂದರೆ ಈ ಪುರುಷನು ಆದಿತ್ಯನಿಂದ ಆಚೆಗೆ ಇರುವ ಲೋಕಗಳನ್ನೆಲ್ಲ ಆಳುತ್ತಾನೆ. ದೇವತೆಗಳ ಕಾಮಗಳಿಗೂ ಒಡೆಯನಾಗಿದ್ದಾನೆ– ಎಂದು ಹೇಳಿರುವದ ರಿಂದ ಹೀಗೆ ಅರ್ಥಮಾಡಬೇಕು. ಇದರಿಂದ ನಮಗೆ ಆ ದೇವನ ಮಹಿಮೆಯು ಅರಿ ವಾಗುತ್ತದೆ. ಸತ್ಯಲೋಕಪರ್ಯಂತವಾದ ಎಲ್ಲಾ ಲೋಕಗಳಿಗೂ ಈತನೇ ಅಧಿಪತಿ ಯಾಗಿರುತ್ತಾನೆ. ಇಂಥ ಮಹಿಮಾನ್ವಿತನೆಂದು ಚಿಂತಿಸುವದರಿಂದ ಉಪಾಸಕನು ಈ ಹಿರಣ್ಮಯಪುರುಷನ ಉಪಾಸನೆಯಿಂದ ಸತ್ಯಲೋಕವನ್ನು ಪಡೆದುಕೊಳ್ಳುವನು– ಎಂದು ತಿಳಿದುಬರುತ್ತದೆ. ಈ ಪುರುಷನು 'ಉದ್ಗೀಥ'ನೆಂದೂ ಪ್ರಸಿದ್ಧನಾಗಿರುವನು. ಹೇಗೆಂದರೆ: ಋಗಾದಿಗಳು ಇವನ ಗೆಣ್ಣುಗಳಾಗಿರುವದು, ಈತನು ಪಾಪಗಳಿಂದ ರಹಿತನಾಗಿರುವದು– ಇವೇ ಉದ್ಗೀಥನಾಮದ ವೈಶಿಷ್ಟ್ಯಗಳಾಗಿವೆ. 'ಹಿರಣ್ಮಯ ಪುರುಷ'ನೆಂಬ ಹೆಸರೇ ಬಹಳ ಚೆನ್ನಾಗಿರುವಲ್ಲಿ ಉದ್ಗೀಥನೆಂಬ ಅಡ್ಡಹೆಸರು ಏಕೆ? ಎಂದು ಆಕ್ಷೇಪಿಸಬಾರದು. ದೇವತೆಗಳಿಗೆ ತಮ್ಮ ಹೆಸರನ್ನು ಮರೆಮಾಚಿ ರೂಪಾಂತರ ದಿಂದ ಹೇಳಿಕೊಳ್ಳುವದೇ ಪ್ರಿಯವಾಗಿರುತ್ತದೆಯಂತೆ. ಹಾಗೆಯೇ ಇಲ್ಲಿಯೂ ತಿಳಿಯಬೇಕು. ಇಷ್ಟು ವಿಷಯಗಳನ್ನು ಉಪನಿಷತ್ತಿನಲ್ಲಿ ವಿವರಿಸಿರುತ್ತದೆ.

ಈಗ ನಾವು ಆದಿತ್ಯಪುರುಷನ ಉಪಾಸನೆಗೆ ಸಿದ್ಧರಾಗುವದು ಹೇಗೆಂದು ವಿಚಾರಮಾಡೋಣ. ಆದಿತ್ಯನು ಪ್ರತ್ಯಕ್ಷದೇವತೆಯೆಂಬುದು ನಿರ್ವಿವಾದವು. ಆತನು ಒಬ್ಬನೇ, ಎಂಬಿದೂ ಸ್ವಚ್ಛನೂ ತೇಜೋಮಯನೂ ಲೋಕಗಳ ಪೋಷಕನೂ ಸರ್ವರಿಗೂ ಪ್ರಿಯನೂ ಆಗಿರುವದೂ ನಮಗೇ ತಿಳಿದಿದೆ. ಇಂಥ ಆದಿತ್ಯನು ನಿಜ ವಾಗಿ ಯಾರು? ಎಂದರೆ ನಮಗೆ ಹೊರಗೆ ಕಾಣುವ ತೇಜೋಮಯವಾದ ಮಂಡಲ ವಲ್ಲ. ಅದು ಜಡವು. ವಿಜ್ಞಾನಿಗಳ ಪ್ರಕಾರ ಅದೊಂದು ಉರಿಯುವ ಗೋಳವು. ಆದರೆ ಆ ಉಪಾಧಿಯಿಂದ ಉಪಲಕ್ಷಿತನಾಗಿ ಚೇತನನಾಗಿದ್ದು ಮಂಡಲಾಭಿಮಾನಿ ಯಾದ 'ನಾರಾಯಣ'ನೆಂಬ ಹೆಸರಿನ ಅಲ್ಲಿರುವ ಹಿರಣ್ಮಯಪುರುಷನು ಬೇರೆಯೇ– ಎಂದು ಶಾಸ್ತ್ರಗಳ ಅಭಿಪ್ರಾಯ.

ಪುರಾಣಗಳಲ್ಲಿ ಪ್ರಸಿದ್ಧವಾಗಿರುವ ಈ ಕೆಳಗಿನ ಪದ್ಯವನ್ನು ನೋಡಿರಿ.

ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ
ನಾರಾಯಣಃ ಸರಸಿಜಾಸನಸನ್ನಿವಿಷ್ಟಃ ।
ಕೇಯೂರವಾನ್ ಮಕರಕುಂಡಲವಾನ್ ಕಿರೀಟೀ
ಹಾರೀ ಹಿರಣ್ಮಯವಪುಃ ಧೃತಶಂಖಚಕ್ರಃ ॥

"ಸೂರ್ಯಮಂಡಲದೊಳಗೆ ಇದ್ದುಕೊಂಡಿರುವ, ಕಮಲದ ಆಸನದಲ್ಲಿ ಕುಳಿತಿರುವ, ಕೇಯೂರ (ಭುಜಕೀರ್ತಿ), ಮೀನಿನ ಆಕಾರದ ಕರ್ಣಕುಂಡಲಗಳು, ಕಿರೀಟ, ರತ್ನಹಾರ, ಶಂಖಚಕ್ರಗಳನ್ನು ಧರಿಸಿರುವವನೂ ಚಿನ್ನದಂತೆ ಹೊಂಬಣ್ಣವುಳ್ಳವನೂ ಆದ ನಾರಾಯಣನು ಧ್ಯಾನಕ್ಕೆ ವಿಷಯನಾಗಿರುವನು" ಎಂದು ಈ ಶ್ಲೋಕದ ಅರ್ಥ. ಇದರಲ್ಲಿ ಬಹಳಮಟ್ಟಿಗೆ ಉಪನಿಷತ್ತಿನ ಅಭಿಪ್ರಾಯವನ್ನೇ ಅಡಕಮಾಡಿದೆ. ದ್ವಿಜರು ಸಂಧ್ಯಾವಂದನೆಮಾಡುವಾಗ ಜಪಿಸುವ ಗಾಯತ್ರೀಮಂತ್ರದ ಅರ್ಥವನ್ನು ಅನುಸಂಧಾನಮಾಡಿದರೂ ಇದೇ ನಾರಾಯಣನ ಉಪಾಸನೆಯೇ ಕಂಡುಬರುತ್ತದೆ. ಆದ್ದರಿಂದ ಉಪನಿಷತ್ತಿನಲ್ಲಿ ಕೊಟ್ಟಿರುವ ಹೆಚ್ಚಿನ ವಿಶೇಷಣಗಳನ್ನೂ ಸೇರಿಸಿಕೊಂಡು ನಾವು ಪ್ರತಿದಿನವೂ ಪ್ರಾತಃಕಾಲದಲ್ಲಿ ಈ ಹಿರಣ್ಮಯಪುರುಷನ ಉಪಾಸನೆಯನ್ನು ಕೈಗೊಳ್ಳಬಹುದಾಗಿದೆ. ವೈದಿಕಕರ್ಮಗಳನ್ನು ಅನುಷ್ಠಾನಮಾಡಲು ಸೌಕರ್ಯಗಳಿಲ್ಲದವರೂ ಸಹ ಮೇಲ್ಕಂಡ ಶ್ಲೋಕವನ್ನೇ ಪಠಿಸುತ್ತಾ ಸೂರ್ಯಾಂತರ್ಗತ ಪುರುಷನನ್ನು ಹೃದಯದಲ್ಲಿ ಚಿಂತಿಸಬಹುದು. ಇಲ್ಲಿ ಉಪಾಸನೆಯು ಮುಖ್ಯವೇ ಹೊರತು ಮಂತ್ರತಂತ್ರಗಳಲ್ಲ. ಆದರೆ ಅವುಗಳೂ ಇದ್ದರೆ ಚಿನ್ನಕ್ಕೆ ಸುವಾಸನೆಯಿಟ್ಟಂತೆ ಒಳ್ಳೆಯದೇ ಅಯಿತು. ಹೀಗೆ ಹಿರಣ್ಮಯಪುರುಷನ ಉಪಾಸನೆಯನ್ನು ಪ್ರಾರಂಭಕ್ಕೆ ಎಲ್ಲರೂ ಮಾಡಬಹುದಾಗಿದೆ. ಸೂರ್ಯನು ಎಲ್ಲರಿಗೂ ಸುಲಭನಾಗಿ ಗೋಚರನಾಗುವದರಿಂದ ಹಾಗೂ ಅವನ ತೇಜಸ್ಸು ಯಾವದೇ ಪ್ರಾಣಿಗೂ ಪಕ್ಷಪಾತವಿಲ್ಲದೆ ದೊರಕುವದರಿಂದ ಈ ಸೂರ್ಯಾತ್ಮನನ್ನು ಸರ್ವರೂ ಒಮ್ಮತದಿಂದ ಉಪಾಸನೆಮಾಡಬಹುದಾಗಿದೆ. ಚಿಕ್ಕಮಕ್ಕಳಿಗೆ ಪಾಠಶಾಲೆಗಳಲ್ಲಿ ಹೇಳಿಕೊಡುವ 'ಸ್ವಾಮಿ ದೇವನೆ ಲೋಕಪಾಲನೆ' ಎಂಬ ಹಾಡು ಪೂರ್ಣವಾಗಿ ಆದಿತ್ಯೋಪಾಸನೆಯ ತತ್ತ್ವವನ್ನೇ ಒಳಗೊಂಡಿದೆ. ಜಾತಿ-ಮತಭೇದಗಳು ಏನೇ ಇರಲಿ, ಸೂರ್ಯನ ಧ್ಯಾನವು ಮಾತ್ರ ಯಾರಿಗೂ ಕೆಟ್ಟಬುದ್ಧಿಯನ್ನುಂಟುಮಾಡುವದಿಲ್ಲ. ಈಗಿನ ಕಾಲಕ್ಕೂ ನಾವು ಭಾರತೀಯರಾಗಿ ಬದುಕಲು ಸೂರ್ಯನ ಉಪಾಸನೆಯೊಂದು ಮಾತ್ರವೇ ಸರ್ವಗ್ರಾಹ್ಯವಾಗಿದೆ

ಬ್ರಾಹ್ಮಣನಿಗೆ ಈ ಸೂರ್ಯಚಿಂತೆನೆಯು ವಿಶೇಷವಾಗಿ ಹೇಳಲ್ಪಟ್ಟಿದೆ. ಏಕೆಂದರೆ ಬ್ರಾಹ್ಮಣನು ಮಿತ್ರದೇವತಾಕನೆಂದು ಶಾಸ್ತ್ರಗಳ ಹೇಳಿಕೆ. ಬೇರೆ ಯಾವ ಕರ್ಮಾನುಷ್ಠಾನಗಳನ್ನು ಮಾಡಲಿ, ಬಿಡಲಿ- ಬ್ರಾಹ್ಮಣನು ಗಾಯತ್ರೀಜಪ- ಆ ಮೂಲಕ ಸೂರ್ಯೋಪಾಸನೆಯನ್ನು ಮಾಡಲೇಬೇಕೆಂದು ವಿಧಿಯಿದೆ. ನಮ್ಮ ಬುದ್ಧಿವೃತ್ತಿಗಳನ್ನು ಪ್ರೇರಿಸುವ ಅಂತರ್ಯಾಮಿಯಾದ ಸೂರ್ಯನಾರಾಯಣನು ದ್ವಿಜರಿಗೆಲ್ಲ ಪರಮೋಪಾಸ್ಯನು. ಸಂಧ್ಯಾಧಿಕಾರವುಳ್ಳ ತ್ರೈವರ್ಣಿಕರುಗಳೂ ಈ ಹಿರಣ್ಮಯಪುರುಷನ ಉಪಾಸನೆಗೆ ಮುಖ್ಯಾಧಿಕಾರಿಗಳು. ಇವರುಗಳು ಇದನ್ನು ಮಾಡಿದಲ್ಲಿ ಉಳಿದವರ ಬುದ್ಧಿಗಳೂ ಸನ್ಮಾರ್ಗದಲ್ಲಿ ಪ್ರೇರಿಸಲ್ಪಡುವವು. ಮೇಲು ಪಂಕ್ತಿ ಸರಿಯಾಗಿದ್ದಲ್ಲಿ ಕಾಪಿ ಬರೆಯುವದು ಸುಲಭ. ಹಾಗೆಯೇ ದ್ವಿಜರು ಮೇಲು ಪಂಕ್ತಿಯಾದಲ್ಲಿ ಸಮಾಜವೆಲ್ಲ ಉದ್ಧಾರವಾಗುವದು.

———

# ಸಾಮಾನ್ಯನೀತಿ

ಅಧೋಽಧಃ ಪಶ್ಯತಃ ಕಸ್ಯ ಮಹಿಮಾ ನೋಪಚೀಯತೇ ।
ಉಪರ್ಯುಪರಿ ಪಶ್ಯನ್ತಃ ಸರ್ವ ಏವ ದರಿದ್ರತಿ ॥ ೧ ॥

೧. ತನಗಿಂತ ಕೆಳಗಿನ ಮಟ್ಟದಲ್ಲಿರುವವನ್ನು ನೋಡುತ್ತಾಹೋದಂತೆಲ್ಲ ಯಾವನ ಶ್ರೀಮಂತಿಕೆಯು ತಾನೆ ಹೆಚ್ಚಲಾರದು? ಆದರೆ ಮೇಲುಮೇಲಕ್ಕೆ ನೋಡಿದಂತೆಲ್ಲ ಪ್ರತಿಯೊಬ್ಬನೂ ಬಡವನೇ ಆಗುವನು.

ಅಲಬ್ಧಂ ಚೈವ ಲಿಪ್ಸೇತ ಲಬ್ಧಂ ರಕ್ಷೇದವೇಕ್ಷಯಾ ।
ರಕ್ಷಿತಂ ವರ್ಧಯೇತ್ ಸಮ್ಯಕ್ ವೃದ್ಧಂ ತೀರ್ಥೇಷು ನಿಕ್ಷಿಪೇತ್ ॥ ೨ ॥

೨. ಈವರೆಗೆ ತನಗೆ ದೊರಕದೆ ಇರುವದನ್ನು ಬಯಸಬೇಕು. ದೊರೆತದ್ದನ್ನು ಕಾಪಾಡಿಕೊಳ್ಳಬೇಕು. ಕಾಪಾಡಲ್ಪಟ್ಟದ್ದನ್ನು ಬೆಳೆಸಬೇಕು. ವೃದ್ಧಿಯಾದದ್ದನ್ನು ಸದ್ವಿನಿಯೋಗಮಾಡಬೇಕು.

ಏತಾವಜ್ಜನ್ಮಸಾಫಲ್ಯಂ ಯದನಾಯತ್ತವೃತ್ತಿತಾ ।
ಯೇ ಪರಾಧೀನತಾಂ ಯಾತಾಸ್ತೇ ವೈ ಜೀವಂತಿ ಕೇ ಮೃತಾಃ ॥ ೩ ॥

೩. ಬೇರೊಬ್ಬರಿಗೆ ಭಾರವಾಗದೆ (ಆಶ್ರಿತನಾಗದೆ) ಜೀವಿಸುವದೇ ಹುಟ್ಟಿನ ಸಾರ್ಥಕವು. ಆದರೆ ಯಾರು ಪರಾಧೀನರಾಗಿ ಬದುಕುವರೋ ಅವರು ಭೂಮಿಯಲ್ಲಿ ಸತ್ತು ಬದುಕಿರುತ್ತಾರೆ.

ಪೃಷ್ಠತಃ ಸೇವಯೇದರ್ಕಂ ಜಠರೇಣ ಹುತಾಶನಮ್ ।
ಸ್ವಾಮಿನಂ ಸರ್ವಭಾವೇನ ಪರಲೋಕಮಮಾಯಯಾ ॥ ೪ ॥

೪. ಸೂರ್ಯನನ್ನು ಬೆನ್ನಿನಿಂದ ಸೇವಿಸಬೇಕು. (ಬಿಸಿಲು ಕಾಯಿಸುವಾಗ ಬೆನ್ನೊಡ್ಡಬೇಕು). ಬೆಂಕಿ ಕಾಯಿಸುವಾಗ ಹೊಟ್ಟೆಯನ್ನೊಡ್ಡಬೇಕು. ಯಜಮಾನನಿಗೆ ಸೇವೆಮಾಡುವಾಗ ಪೂರ್ತಿ ಮೈಮುರಿದು ದುಡಿಯಬೇಕು. ಪರಲೋಕ(ಸ್ವರ್ಗ)ವನ್ನು ಸಾಧಿಸುವಾಗ ಮನಸ್ಸಿನಲ್ಲಿ ಕಪಟವಿಲ್ಲದೆ ಧರ್ಮವನ್ನಾಚರಿಸಬೇಕು.

ಆರೋಪ್ಯತೇ ಶಿಲಾ ಶೈಲೇ ಯತ್ನೇನ ಮಹತಾ ಯಥಾ ।
ನಿಪಾತ್ಯತೇ ಕ್ಷಣೇನಾಧಸ್ತಥಾತ್ಮಾ ಗುಣದೋಷಯೋಃ ॥ ೫ ॥

೫. ಒಂದು ಬಂಡೆಯನ್ನೆತ್ತಿ ಮೇಲಿರಿಸಬೇಕಾದರೆ ಬಹಳವಾಗಿ ಶ್ರಮಿಸಬೇಕು. ಅದನ್ನೇ ಬೆಟ್ಟದಿಂದ ಉರುಳಿಸಲು ಅಲ್ಪಸಮಯವೇ ಸಾಕು. ಹಾಗೆಯೇ ಗುಣಗಳಿಂದ ತನ್ನನ್ನು ಮೇಲೆತ್ತಿಕೊಳ್ಳಲು ಮನುಷ್ಯನು ಬಹಳ ಪ್ರಯಾಸಪಡಬೇಕು. ದೋಷಗಳಿಂದ ಕೆಡವಿಕೊಳ್ಳಲು ಸ್ವಲ್ಪವೇ ಆಯಾಸವು ಸಾಕು.

---

# ಸತ್ಯಕಾಮನ ಪತ್ರಗಳು

## ಯೋಗದಿಂದ ರೋಗನಿವಾರಣೆ

"ನಾನೊಬ್ಬ ಬ್ಯಾಂಕ್ ನೌಕರ. ಈಚೆಗೆ ಒಬ್ಬ ಋಷಿಗಳ ಉಪದೇಶವನ್ನು ಶ್ರವಣಮಾಡಲು ಹೋದಾಗ ಸಮಾಧಿಯೋಗದಿಂದ ಖಾಯಿಲೆಗಳೆಲ್ಲ ನಾಶವಾಗುವವೆಂದೂ ಸಮಾಧಿಯನ್ನು ಪಡೆಯುವದು ಕೈಯಿಂದ ಚಿಟಿಕೆಹೊಡೆಯುವಷ್ಟು ಸುಲಭವೆಂದೂ ಕೇಳಿದೆನು. ನನಗೇನೂ ಸದ್ಯಕ್ಕೆ ಯಾವ ಕಾಯಿಲೆಗಳೂ ಇಲ್ಲ. ಆದರೆ ಸಮಾಧಿಯು ಅಷ್ಟು ಸುಲಭವೆಂದಾದರೆ ನಾನೇಕೆ ಸಂಪಾದಿಸಿಕೊಳ್ಳಬಾರದು ? ಎಂದು ಹಂಬಲವುಂಟಾಗಿದೆ. ಸಮಾಧಿಯಿಂದ ದೊರಕುವ ಮಾನಸಿಕಶಾಂತ್ಯಾದಿಗಳು ಈಗ್ಗೆ ಎಲ್ಲರಿಗೂ ಬೇಕಾದದ್ದೇ ಆಗಿವೆ. ನಾನು ಸಮಾಧಿಯೋಗವನ್ನು ಕಲಿಯಲೆ ? ಬೇಡವೆ ? ಎಂಬ ಸಂಶಯಕ್ಕೊಳಗಾಗಿರುವೆನು. ಕೆಲವು ಸ್ನೇಹಿತರೂ ಮನೆಯವರೂ ಬೇಡವೆಂದೇ ತಿಳಿಸುತ್ತಾರೆ. ಈ ವಿಷಯಕ್ಕೆ ತಮ್ಮ ಅಭಿಪ್ರಾಯವೇನು ?" ಎಂದು ನೀವು ಕೇಳಿ ಬರೆದಿರುವ ಪತ್ರವು ಬಂದಿದೆ.

ನಾನು ನಿಜವಾಗಿಯೂ ಯೋಗಶಾಸ್ತ್ರಪರಿಣತನಲ್ಲ. ಪ್ರಾಣಾಯಾಮಾಸನಾದಿಗಳ ವಿಷಯಕ್ಕೆ ಕಿವಿಯಲ್ಲಿ ಕೇಳಿರುವದರ ಹೊರತು ಮತ್ತೇನೂ ನನಗೆ ಬರದು. ಆದ್ದರಿಂದ ನಿಮಗೆ ಸಮಾಧಿಯೋಗದ ಕಲಿಕೆಯ ಬಗ್ಗೆ ಏನೂ ಹೇಳಲಾರೆ. ನೀವೇ ನಿರ್ಣಯಿಸಿಕೊಳ್ಳುವದೇ ಉತ್ತಮ. ಆದರೆ ಯೋಗ, ಸಮಾಧಿ, ರೋಗನಿವಾರಣೆ- ಇವುಗಳ ಬಗ್ಗೆ ನನ್ನ ಅಭಿಪ್ರಾಯವನ್ನು ಮಾತ್ರ ಈಗ ತಿಳಿಸಲಿಚ್ಛಿಸುತ್ತೇನೆ. ನಿಮಗೇನಾದರೂ ಉಪಯೋಗವಾದರೆ ಸಂತೋಷ.

ಯೋಗಶಬ್ದಕ್ಕೆ ನಾನಾರ್ಥಗಳಿವೆ. (೧) ಪಂಚಾಂಗದಂತೆ 'ಯೋಗ' ಎಂಬುದೊಂದು ಕಾಲಾವಯವವಾಗಿದೆ. ಫಲಶ್ರುತಿಯನ್ನು ಹೇಳುವಾಗ ಜ್ಯೋತಿಷ್ಕರು 'ಯೋಗಾದ್ರೋಗನಿವಾರಣಮ್' ಎಂದೇ ಹೇಳುವರು. ಈ ದಿನ ಯಾವ ವಾರ ? ಎಂದು ತಿಳಿದುಕೊಂಡಂತೆ ವಿಷ್ಕಂಭಾದಿಯೋಗಗಳಲ್ಲಿ ಈ ದಿನ ಯಾವ ಯೋಗ ? ಎಂದು ತಿಳಿದರೆ ರೋಗನಾಶರೂಪವಾದ ಫಲವುಂಟೆಂದು ಅವರ ಅಭಿಪ್ರಾಯ. (೨) ಇನ್ನು "ನನಗೆ ಲಾಟರಿ-ಬಹುಮಾನಯೋಗವಿಲ್ಲ ; ಸರ್ಕಾರಿ ಉದ್ಯೋಗದ ಯೋಗವಿಲ್ಲ" ಇತ್ಯಾದಿಗಳಲ್ಲಿ 'ಯೋಗ'ವೆಂದರೆ ಅದೃಷ್ಟವೆಂದರ್ಥ. (೩) ಸುಪ್ರಸಿದ್ಧ ಪಾತಂಜಲಶಾಸ್ತ್ರದಂತೆ ಯೋಗವೆಂದರೆ ಚಿತ್ತವೃತ್ತಿನಿರೋಧ- ಎಂದಭಿಪ್ರಾಯ. ನಮ್ಮ ಮನಸ್ಸು ಚಂಚಲವಾಗಿರುವದರಿಂದ ಬ್ರಹ್ಮದ ಆನಂದವು ದಕ್ಕದೆ ವಂಚಿತರಾಗಿರುತ್ತೇವೆ ಆದ್ದರಿಂದ ಅದನ್ನು ಅಳ್ಳಾಡದಂತೆ ನೆಲೆಗೊಳಿಸಲು ಮಾಡುವ ಪ್ರಯತ್ನವಿಶೇಷವೇ ಯೋಗವೆಂದು ಆ ದರ್ಶನಕಾರರ ಮತವಾಗಿದೆ. ಅದಕ್ಕೆ ಅಂಗವಾಗಿ ಆಸನ- ಪ್ರಾಣಾಯಾಮಾದಿಗಳನ್ನು ಆ ಶಾಸ್ತ್ರದಲ್ಲಿ ವಿವರಿಸಿ ಹೇಳಿದ್ದಾರೆ. ಅವುಗಳಲ್ಲಿ ಕೆಲವು ಸಂಸಾರಿಗಳಿಗೆ ಕಷ್ಟಸಾಧ್ಯವಾಗಿರುವದರಿಂದ 'ಹಠಯೋಗ'ದಿಂದ ಸಾಧಿಸುವ ಮಾರ್ಗವೂ ಸೂಚಿಸಲ್ಪಟ್ಟಿದೆ. ಒಟ್ಟಿನಲ್ಲಿ ಪಾತಂಜಲಯೋಗವು ಎಲ್ಲ

ಮಟ್ಟದ ಸಾಧಕರಿಗೂ ಒಗ್ಗಲಾರದೆಂಬುದು ನಿರ್ವಿವಾದವು. (೪) ಇನ್ನು ವೇದಾಂತ ದರ್ಶನದಂತೆ ಯೋಗವೆಂದರೆ 'ಅಧ್ಯಾತ್ಮಸಾಧನ'ವೆಂದೂ ಆತ್ಮನಲ್ಲೇ ನೆಲೆನಿಲ್ಲುವ 'ಸಮಾಧಿಸ್ಥಿತಿ'ಯೆಂದೂ ಎರಡೂ ಅರ್ಥಗಳಿವೆ. ಹೀಗೆಲ್ಲ ಯೋಗದ ಮಹಿಮೆ ಅಪಾರವಾಗಿರುವದರಿಂದ ವಿಚಾರಿಸುತ್ತಾಹೋದಂತೆಲ್ಲ ಮತ್ತಷ್ಟು ಸಂಶಯಗಳೇ ಮೂಡಬಹುದು. ಆದ್ದರಿಂದ ನಿಮಗೆ ಈಗ ವೈದಿಕಯೋಗದ ಪರಿಚಯವನ್ನು ಮಾತ್ರ ಮಾಡಿಕೊಡುತ್ತೇನೆ.

ಅಧ್ಯಾತ್ಮಶಾಸ್ತ್ರದಲ್ಲಿ ಕೆಲವು ವೇಳೆ ಸಾಧನವನ್ನೂ ಫಲವನ್ನೂ ಒಂದೇ ಶಬ್ದದಿಂದ ವ್ಯವಹರಿಸುವದುಂಟು. ಉದಾಹರಣೆಗೆ 'ಜ್ಞಾನ'ವೆಂದರೆ ತತ್ತ್ವವಿಚಾರಸರಣಿಯಿಂದ ಪಡೆಯುವ ತಿಳಿವಳಿಕೆ ಎಂದೂ, ಫಲರೂಪವಾದರೆ ಬ್ರಹ್ಮವೇ-ಎಂದೂ ಅರ್ಥವಿದೆ. 'ಜ್ಞಾನಯೋಗೇನ ಸಾಂಖ್ಯಾನಾಮ್' ಎಂಬಲ್ಲಿ ಮೊದಲನೆಯ ಅರ್ಥವೂ 'ಜ್ಞಾನಂ ಜ್ಞೇಯಂ ಜ್ಞಾನಗಮ್ಯಮ್' ಎಂಬಲ್ಲಿ ಎರಡನೆಯ ಅರ್ಥವೂ ವಿವಕ್ಷಿತವಾಗಿರುವದು. ಅಥವಾ ಮೇಲಿನ ಒಂದೇ ವಾಕ್ಯದಲ್ಲಿಯೇ ಮೇಲ್ಕಂಡ ಎರಡು ಅರ್ಥಗಳಲ್ಲಿಯೂ ಈ ಶಬ್ದವು ಬಳಸಲ್ಪಟ್ಟಿರುವದನ್ನೂ ನೀವು ಗಮನಿಸಬೇಕು. ಹಾಗೆಯೇ ಯೋಗಶಬ್ದವೂ 'ತಾಂ ಯೋಗಮಿತಿ ಮನ್ಯನ್ತೇ ಸ್ಥಿರಾಮಿಂದ್ರಿಯಧಾರಣಾಮ್' ಎಂಬಲ್ಲಿ ಸಾಧನಾರ್ಥದಲ್ಲಿಯೂ 'ತಂ ವಿದ್ಯಾತ್ ದುಃಖಸಂಯೋಗವಿಯೋಗಂ ಯೋಗಸಂಜ್ಞಿತಮ್' ಎಂಬಲ್ಲಿ ಫಲಾರ್ಥದಲ್ಲಿಯೂ ಬಳಸಲ್ಪಟ್ಟಿರುತ್ತದೆ. ಆದ್ದರಿಂದ ವಿಚಾರಕನು ಸರಿಯಾದ ಗುರುವಿನಿಂದ ಅಧ್ಯಾತ್ಮಶಾಸ್ತ್ರವನ್ನು ಕಲಿತು ಅನಂತರವೇ ಸಾಧನವನ್ನಾರಂಭಿಸಬೇಕು. ವೇದಾಂತಗಳ ಅಭಿಪ್ರಾಯದಂತೆ ಯಾವದೇ ಸಾಧನವನ್ನು ಕೈಗೊಳ್ಳುವಾಗಲೂ ಅದರ ಪರಿಚಯ, ಗುರಿ- ಮುಂತಾದ ತಿಳಿವಳಿಕೆ ಮೊದಲು ಅಗತ್ಯ. ತಿಳಿವಳಿಕೆಯ ಹಿನ್ನೆಲೆಯಿಲ್ಲದೆ ಯಾವದೇ ಸಾಧನವನ್ನೂ ಕುರುಡುಕುರುಡಾಗಿ ವೇದಾಂತಶಾಸ್ತ್ರವು ಎಂದಿಗೂ ಉಪದೇಶಿಸುವದಿಲ್ಲ.

ಈಚೆಗೆ ನಿಜವಾದ ವೇದಾಂತಸಿದ್ಧಾಂತಕ್ಕೆ ದರ್ಶನ- ಎಂಬ ಕಾರಣದಿಂದ ತರ್ಕಶಾಸ್ತ್ರವೂ, ಸಾಧನಗಳ ಮಟ್ಟದಿಂದ ಪಾತಂಜಲಯೋಗವೂ ಬೆರೆತು ನಿಜವಾದ ವೇದಾಂತವು ವನಾಂತರ್ಗತವಾಗಿಬಿಟ್ಟಿದೆ. ಆದ್ದರಿಂದ ಯೋಗಾದಿದರ್ಶನಗಳ ಕಲೆಬೆರಕೆಯಿಲ್ಲದ ಅಧ್ಯಾತ್ಮಯೋಗವನ್ನು ನೀವು ಕಂಡುಕೊಳ್ಳಬೇಕಾದರೆ ಸ್ವಲ್ಪಮಟ್ಟಿಗಾದರೂ ಶಾಂಕರಭಾಷ್ಯವನ್ನು ಅಧ್ಯಯನಮಾಡಲೇಬೇಕು. ಆಗ ಯೋಗದ ಮಹತ್ತ್ವವೇನೆಂಬುದು ನಿಮಗೆ ಗೋಚರವಾಗುವದು. ಅನಂತರ ಅದರ ಹಿನ್ನೆಲೆಯಲ್ಲಿ ಎಲ್ಲಾ ಯೋಗಗಳ ಹಾಗೂ ಅವುಗಳಿಂದ ಲಭ್ಯವಾಗುವ ಇಹಪರ-ಫಲಗಳ ತಿರುಳನ್ನು ಸಮನ್ವಯಮಾಡಿಕೊಳ್ಳಬಹುದು. ಇಲ್ಲವಾದರೆ ಕುರುಡರು ಆನೆಯನ್ನು ನಿರ್ಣಯಿಸಿದಂತೆ ಯೋಗದ ಏಕದೇಶಪರಿಚಯವೇ ನಿಮ್ಮ ಪಾಲಿಗೆ ಸಿದ್ಧಾಂತವಾಗಿ ಪರಿಣಮಿಸುವದು. ಇದು ಲೌಕಿಕದೃಷ್ಟಿಯಿಂದ ಬೆಲೆಬಾಳತಕ್ಕದ್ದಾದರೂ ಪೂರ್ಣದೃಷ್ಟಿಯಿಂದ ಪರಿಚ್ಛಿನ್ನವೇ ಆಗಿರುವದು.

ಈಗ ಪ್ರಕೃತವಿಚಾರಕ್ಕೆ ಬರೋಣ. ಯೋಗವು ಚಿಟಿಕೆಹೊಡೆದಷ್ಟು ಸುಲಭ-ಎಂದರೆ ಫಲರೂಪದಲ್ಲಿರುವಾಗ ಎಂದರ್ಥ. ಇದು ಸರಿ. ನಿತ್ಯಶುದ್ಧನಾದ ನಮ್ಮ ಆತ್ಮನಲ್ಲಿ ಯಾವ ಸಂಸಾರಧರ್ಮಗಳೂ ಇಲ್ಲವಾದ್ದರಿಂದ ಹಾಗೆಂದು ನಿಶ್ಚಯಿಸಿದ ಮೇಲೆ ಕ್ಷಣಕಾಲವೂ ತಡವಿಲ್ಲದೆ ಅಥವಾ ಜ್ಞಾನಸಮಕಾಲದಲ್ಲಿಯೇ ನಮಗೆ ಸಮಾಧಿಯೋಗವು ದಕ್ಕಿಬಿಡುತ್ತದೆ. ಇದಕ್ಕೆ ಯಾವ ಪ್ರಯತ್ನವೂ ಬೇಕಿಲ್ಲ. ಸ್ವತಃ ಸಿದ್ಧವಾಗಿರುವ ಈ ಆನಂದವನ್ನು ಕಂಡುಕೊಳ್ಳಲು ಅಡ್ಡಿಯಾಗಿರುವ ಮನಸ್ಸಿನ ಚಾಂಚಲ್ಯಾದಿದೋಷಗಳನ್ನು ತೆಗೆಯುವದನ್ನೇ ಇಲ್ಲಿ ಪ್ರಯತ್ನವೆಂದಿದೆ. ಆದರೆ ಯೋಗದ ಫಲವು ಖಂಡಿತವಾಗಿಯೂ ದೇಶ, ಕಾಲ, ನಿಮಿತ್ತ, ಉಪಾಧಿಗಳ ಹಂಗಿನಿಂದ ಆಗತಕ್ಕದ್ದಲ್ಲವೇ ಅಲ್ಲ. ಅದು ಎಂದೆಂದೂ ತಾನೇ ಇದ್ದುಕೊಂಡಿರುವ ನಿತ್ಯಾನಂದರೂಪವಾಗಿದೆ. ಇದನ್ನೇ ಋಷಿಗಳು ಚಿಟಿಕೆಯಿಂದ ತೋರಿಸಿರಬೇಕು.

ಇನ್ನು ನೀವು ಯೋಗವನ್ನು ಕಲಿಯುವ ವಿಚಾರ. ಇದಕ್ಕೆ ರೋಗಿಯು ಮಾತ್ರವೇ ಅಧಿಕಾರಿ ಎಂಬ ಭ್ರಾಂತಿಯನ್ನು ಬಿಡಿರಿ. ನಾವೆಲ್ಲರೂ ಶೋಕಮೋಹಾದಿ ರೋಗಗಳಿಂದ ಬಳಲುತ್ತಿರುವ ರೋಗಿಗಳೇ ಆಗಿದ್ದೇವೆ. ಆದ್ದರಿಂದ ಎಲ್ಲಾ ದೈಹಿಕ-ಮಾನಸಿಕವಾದ ರೋಗಗಳಿಗೂ ಮೂಲಭೂತವಾದ ಅವಿದ್ಯಾರೋಗವನ್ನು ಕಳೆದು ಕೊಳ್ಳಲು ನಾವೆಲ್ಲರೂ ಯೋಗಿಗಳಾಗಬೇಕಾದದ್ದು ತೀರ ಅಗತ್ಯವಾಗಿದೆ. ಆದರೆ ನಮ್ಮ ನಮ್ಮ ಪರಿಸ್ಥಿತಿಯನ್ನೂ ಈಗ ನಾವಿರುವ ಮಟ್ಟವನ್ನೂ ಅರಿತು ಯೋಗ ವನ್ನಾರಂಭಿಸಬೇಕು. ನನ್ನ ಅಭಿಪ್ರಾಯದಲ್ಲಿ ಯಾವ ಯೋಗಸಾಧನೆಯೇ ಆಗಲಿ, ಮೊದಲು ಶರೀರಸ್ವಾಸ್ಥ್ಯವನ್ನು ಒದಗಿಸಿಕೊಡುವದಾದರೆ ಅವಶ್ಯವಾಗಿ ಅದನ್ನು ಸ್ವೀಕರಿಸಿ ಕಲಿಯಬೇಕು. ಶರೀರ-ಮನಸ್ಸುಗಳು ಚೆನ್ನಾಗಿ ಅಣಿಯಾದಂತೆಲ್ಲ ಆತ್ಮ ದರ್ಶನಯೋಗಕ್ಕೆ ಅನುಕೂಲವಾಗುತ್ತದೆ. ಆದ್ದರಿಂದ ನೀವು ಕೇವಲ ಶಾರೀರಕರೋಗ ಪರಿಹಾರದ ಗುರಿಯನ್ನು ಮಾತ್ರ ಯೋಗಕ್ಕೆ ಫಲವಾಗಿ ಇಟ್ಟುಕೊಳ್ಳದೆ ಸಾಂಸಾರಿಕ ರೋಗಪರಿಹಾರದವರೆಗೂ ಅದನ್ನು ಬೆಳೆಯಿಸುವ ಸ್ಥಿರಸಂಕಲ್ಪವನ್ನು ಮಾಡಬೇಕು.

ಇನ್ನು ಯೋಗವು ತೀರ ಸುಲಭ-ಎಂಬ ವಿಚಾರ. ನೀವು ಬ್ಯಾಂಕ್ ನೌಕರರಾದ್ದ ರಿಂದ ಯಾವಾಗಬೇಕಾದರೂ ಎಷ್ಟು ಬೇಕಾದರೂ ಹಣವನ್ನು ನೀವು ಪಡೆಯುವದು ತೀರ ಸುಲಭ-ಎಂದು ಯಾರಾದರೂ ಹೇಳಿದರೆ ಒಪ್ಪುವಿರಾ? ಇಲ್ಲ. ಏಕೆಂದರೆ ಬ್ಯಾಂಕಿನಲ್ಲಿರುವ ಹಣವೆಲ್ಲ ನಿಮ್ಮದಲ್ಲ. ಹಾಗೆಯೇ ನಿಮ್ಮ ಆತ್ಮನೇ ಆಗಿ ಭಗವಂತನು ಇದ್ದರೂ ಅವನನ್ನು ಅರಿಯುವವರೆಗೆ ನಿತ್ಯಾನಂದವು ನಿಮ್ಮದಾಗಲಾರದು. ಆದ್ದ ರಿಂದ ಆ ಆತ್ಮವಿಜ್ಞಾನವು ಸುಲಭವೆಂದು ಹೇಗೆತಾನೆ ಹೇಳಲಾದೀತು? ಯೋಚಿಸಿರಿ. ಕಡೆಯದಾಗಿ ನೀವು ತಿಳಿಯಬೇಕಾದದ್ದೇನೆಂದರೆ : ಕೆಲವು ದಿನಗಳು ಸಮಾಧಿ ಯೋಗವನ್ನಭ್ಯಾಸಿಸಿ ಕೆಲವು ಕಾಲ ಧ್ಯಾನಮಾಡಿ ಶಾರೀರಕದೋಷಗಳನ್ನು ಪರಿ ಹರಿಸಿಕೊಂಡಮಾತ್ರಕ್ಕೆ ಕೃತಕೃತ್ಯನಾದೆನೆಂದು ಎಂದಿಗೂ ಭಾವಿಸದಿರಿ. ವೈದಿಕವಾದ ಅಧ್ಯಾತ್ಮಯೋಗದ ಮಜಲು ಜೀವನ್ಮುಕ್ತಿಯಲ್ಲಿ ಮಾತ್ರವೇ ಪೂರ್ಣವಾಗುವದೆಂದು ತಿಳಿಯಿರಿ.

———

## ಆರಿಸಿದ ಅರಳುಮೊಗ್ಗುಗಳು

(ಬೃಹದ್ಯೋಗದರ್ಶನ-ಗ್ರಂಥದಿಂದ)

೧. ಒಂದು ಚಿಕ್ಕ ಅಶ್ವತ್ಥದ ಮರವನ್ನೋ, ಆಲದ ಮರವನ್ನೋ, ನೆಟ್ಟಾಗ ಅದನ್ನು ದನಕರುಗಳು ತಿಂದು ನಾಶಪಡಿಸಬಾರದೆಂದು ಭದ್ರವಾದ ಬೇಲಿಯನ್ನು ಕಟ್ಟಬೇಕಾಗುತ್ತದೆ. ಆದರೆ ಅದೇ ಮರವು ದೊಡ್ಡದಾಗಿ ಬೆಳೆದ ನಂತರ ಅದಕ್ಕೆ ಆನೆಯನ್ನಾದರೂ ಕಟ್ಟಬಹುದು. ಅದರಂತೆಯೇ ಸಾಧಕನು ಸಾಧನೆಯ ಕಾಲದಲ್ಲಿ ಕೆಲವೊಂದು ನಿಯಮಗಳನ್ನು ಪಾಲಿಸಬೇಕಾಗುವದು. ಇಲ್ಲವಾದರೆ ಯೋಗವು ಸಿದ್ಧಿಸುವುದಿಲ್ಲ. ಆದರೆ ಅತನು ಸಿದ್ಧಿಯನ್ನು ಪಡೆದ ಅನಂತರ ಸಂತೆಯಲ್ಲಾದರೂ ಕುಳಿತು ಸಾಧನೆಮಾಡಬಹುದು. ಸಿದ್ಧನಾದಮೇಲೂ ಅನುಸರಿಸಲೇಬೇಕಾದ ನೀತಿನಿಯಮಗಳುಂಟು. ಏಕೆಂದರೆ ಅತನು ಲೋಕದ ಮುಂದೆ, ಸಮಾಜದ ಮುಂದೆ ಆದರ್ಶವ್ಯಕ್ತಿಯೆನಿಸಿರುವನು. ಆತನ ಆದರ್ಶಜೀವನವನ್ನೇ ಜನತೆಯೂ ಅನುಸರಿಸುವಂತಿರಬೇಕು. ಆದ್ದರಿಂದ ನೀತಿನಿಯಮಗಳು ಸಾಧಕರಿಗೂ ಸಿದ್ಧರಿಗೂ ಜನಸಾಮಾನ್ಯರೆಲ್ಲರಿಗೂ ಅತ್ಯಗತ್ಯವೇ. ತಾಳತಪ್ಪಿದ, ತೂಕತಪ್ಪಿದ ಜೀವನದಿಂದ, ಯಾರಿಗೆತಾನೆ ಸುಖವಿದೆ ?

೨. ಓಂಕಾರವು ಹಿಂದೂ ತತ್ತ್ವಸಿದ್ಧಾಂತದಂತೆ ಬ್ರಹ್ಮನ ಸಂಕೇತ. ಕ್ರಿಶ್ಚಿಯನ್ನರು, ಮಹಮ್ಮದೀಯರು, ಪರ್ಷಿಯನ್ನರು, ಗ್ರೀಕರು- ಮೊದಲಾದವರಿಗೂ ಓಂಕಾರವು ಪರಮಪವಿತ್ರವಾದ ಮಂತ್ರವಾಗಿದೆ. ಪರ್ಷಿಯನ್ ಭಾಷೆಯಲ್ಲಿ ಓಂ ಎಂದರೆ ಓ ನಾನಿದ್ದೇನೆ-ಎಂದರ್ಥ. ಕ್ರಿಶ್ಚಿಯನ್ನರು ಇದನ್ನು 'ಎಮೆನ್' (Amen) ಎನ್ನುತಾರೆ. ಮಹಮ್ಮದೀಯರು 'ಅಮಿಾನ್' ಎನ್ನುವರು; ಗ್ರೀಕರು 'ಅಮಿಾಗಾ' ಎನ್ನುವರು. ಹೀಗೆ ವಿಶ್ವದ ಎಲ್ಲ ಮತಧರ್ಮಗಳಲ್ಲಿಯೂ ಚಿಕ್ಕಪುಟ್ಟ ಬದಲಾವಣೆಗಳೊಡನೆ ಓಂಕಾರವು ಅಸ್ತಿತ್ವದಲ್ಲಿದೆ. ಇದು ಕೆಲವು ಮತಧರ್ಮಗಳಲ್ಲಿ ಶಾಂತಿಯ ಕುರುಹಾಗಿದೆ. ಮತ್ತೆ ಕೆಲವರಲ್ಲಿ ಆನಂದದ ಚಿಹ್ನೆಯಾಗಿದೆ.

೩. 1952ರಲ್ಲಿ ಪಶ್ಚಿಮಜರ್ಮನಿಯ ಬಾನ್ ವಿಶ್ವವಿದ್ಯಾಲಯದಲ್ಲಿ ಕೆಲವರು ಶಾಸ್ತ್ರಜ್ಞರು ನೋಬೆಲ್ ಪ್ರಶಸ್ತಿವಿಜೇತರಾದ ಕೆಲವು ಪ್ರತಿಭಾವಂತರ ಮೆದುಳಿನ ತಂತುಗಳ ನಿರ್ದಿಷ್ಟ ಉತ್ತೇಜಕಕ್ರಿಯೆಯನ್ನು ತಿಳಿಯಲು ಒಂದು ವೈಜ್ಞಾನಿಕ ಅಭ್ಯಾಸವನ್ನು ನಡೆಯಿಸಿದರು. ಆ ಪ್ರತಿಭಾವಂತರ ಮೆದುಳಿನ ಶೇ. 10ರಷ್ಟು ಭಾಗವು ಮಾತ್ರ ಸಕ್ರಿಯ ಅಥವಾ ಪ್ರಜ್ಞಾಪೂರ್ಣವಾದುದೆಂದು ಫಲಿತಾಂಶವು ಬಂದಿತು. ಆಗ ಅವರು ಸಾಮಾನ್ಯಜನರ ಮೆದುಳಿನ ಮೇಲೆ ಪ್ರಯೋಗವನ್ನು ನಡೆಯಿಸಲು ನಾಚಿದರು. ಏಕೆಂದರೆ ಅಂಥವರ ಮೆದುಳಿನ ನೂರನೇ ಒಂದು ಭಾಗವು ಕೂಡ ಉಪಯೋಗವಾಗಿರಲಾರದೆನ್ನಿಸಿತು. ಖಚಿತವಾಗಿ ಹೇಳುವದಾದರೆ ಪಾಶ್ಚಾತ್ಯವಿಜ್ಞಾನಿಗಳು ತಮ್ಮನ್ನು ಸಕ್ರಿಯಗೊಳಿಸಿಕೊಳ್ಳಲು ಭಾರತದತ್ತ ನೋಡುತ್ತಿದ್ದಾರೆ.

---

# ಸಚ್ಚಿದಾನಂದಮನನ

(ಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು)

೨೧೯. ಸದ್ಗುರುವಿನಿಂದ ಶಕ್ತಿಪಾತ, ಗ್ರಂಥಿಭೇದ- ಎಂಬ ಎರಡು ಅನುಗ್ರಹಗಳು ಆಗುವವೆಂದು ದೊಡ್ಡವರು ಹೇಳುತ್ತಾರೆ. ವಿನೀತನಾಗಿ ಶುಶ್ರೂಷೆಮಾಡುವ ಶಿಷ್ಯನಲ್ಲಿ ಗುರುಗಳ ಆಧ್ಯಾತ್ಮಶಕ್ತಿಯು ಬಂದು ಸೇರಿಕೊಳ್ಳುವದು ಶಕ್ತಿಪಾತವು. ಗುರುಗಳ ಅನುಗ್ರಹದಿಂದ ಸಾಧನಗಳು ಬಲಿತು ಅವಿದ್ಯಾರಾಗದ್ವೇಷಾದಿಕಗ್ಗಂಟುಗಳು ಬಿಚ್ಚಿಕೊಳ್ಳುವದು ಗ್ರಂಥಿಭೇದವು. ಆದರೆ ಬರಿಯ ಅಧ್ಯಾತ್ಮಗ್ರಂಥಗಳ ಪಠನದಿಂದ ಗ್ರಂಥಿಯು ದಾರ್ಢ್ಯವೇ ಆಗುವದು. ಸಲ್ಲದ ವಾದವಿವಾದಗಳಿಂದ ಅಧ್ಯಾತ್ಮಶಕ್ತಿಯ ವಿನಾಶವೂ ಆಗುವದು.

೨೨೦. ಸದ್ಗ್ರಂಥಗಳನ್ನು ಅವಶ್ಯವಾಗಿ ಓದಬೇಕು. ಆದರೆ ಗ್ರಂಥವಾಚನವು ಪಂಥಗಳ ಹೋರಾಟಕ್ಕೆ ಉಪಯೋಗವಾಗಬಾರದು. ಸಂತರ ಸಹವಾಸಕ್ಕೂ ಅಂತರ್ಮುಖನಾಗಿ ಆತ್ಮಜ್ಞಾನವನ್ನು ಸಂಪಾದಿಸುವದಕ್ಕೂ ಅದು ಉಪಯೋಗವಾಗಬೇಕು.

೨೨೧. ದೇವಸ್ಥಾನದ ಹೊರಗಡೆ ಅಂಗಡಿಯವರ ಹಾಗೂ ಭಿಕ್ಷುಕರ ಕೂಗಾಟ. ಒಳಗೆ ಪುರಾಣ, ವೇದಮಂತ್ರಗಳ ಗದ್ದಲ- ಈ ನಡುವೆ ಪೂಜೆಯು ಗೌಣವಾಗಿರುತ್ತದೆ. ನಿಜವಾಗಿ ನೋಡಿದರೆ ಗರ್ಭಗುಡಿಯಲ್ಲಿ ಮುಖ್ಯವಾದ ಆರಾಧನೆಯು ನಡೆಯುತ್ತಿರುವದು. ಹೃದಯವೇ ಗರ್ಭಗುಡಿಯು. ಅಲ್ಲಿ ಧ್ಯಾನ ಮಾಡುವದೇ ನಿಜವಾದ ಪೂಜೆಯು. ಅದೇ ಪರಮಾತ್ಮನ ಸಾಮೀಪ್ಯಕ್ಕೆ ಸಾಧನವು. ಗ್ರಂಥಗಳೂ ಹೊರಗಿನ ವಾದಗಳೂ ಆಡಂಬರಗಳೇ ಆಗಿರುವವು. ಶಂಖ-ಜಾಗಟೆಗಳ ಶಬ್ದವನ್ನಂತೂ ಹೇಳಬೇಕಾದದ್ದೇ ಇಲ್ಲ.

೨೨೨. ಪುಸ್ತಕವೇದಾಂತವು ಹೆಚ್ಚಿದರೆ ಮಸ್ತಿಷ್ಕವು ದುರ್ಬಲವಾಗುವದು. ಆಗ ಯಾರು ಏನು ಹೇಳಿದರೂ ವೇದಾಂತವೇ ಎಂಬ ನಂಬಿಕೆಯು ಬಂದುಬಿಡಬಹುದು. ಗ್ರಂಥಗಳ ಹೆಸರನ್ನು ಸಹಸ್ರನಾಮಗಳಂತೆ ಉಚ್ಚರಿಸುವವರು ಎಷ್ಟೋ ಜನರು ಸಿಗಬಹುದು. ಹೆಜ್ಜೆ ಹೆಜ್ಜೆಗೂ ವೇದಾಂತವಾಕ್ಯಗಳನ್ನು ಉದಾಹರಿಸುವವರನ್ನು ಕಾಣಬಹುದು. ಆದರೆ ಅವರಲ್ಲಿ ವೇದದ ಅಂತ-ನಾಶವೇ ಆಗಿರುವವರು ಬಹಳ. ಏಕೆಂದರೆ ವೇದಕ್ಕಿಂತಲೂ ವಾದವೇ ಅವರಿಗೆ ಮುಖ್ಯವಾಗಿರುತ್ತದೆ.

೨೨೩. ವಾದಕ್ಕಾಗಿ ವಾದಮಾಡುವವರು ಸೇರಿದ ಸ್ಥಲದಲ್ಲಿ ವೇದಾಂತಕ್ಕೆ ಅವಕಾಶವಿರಲಾರದು. ಆ ವಾದಿಗಳು ತಮ್ಮ ತಮ್ಮ ಪಕ್ಷವನ್ನು ಸಾಧಿಸುವದಕ್ಕೆಂದು ಹೊಸ ಹೊಸ ಯುಕ್ತಿಗಳನ್ನು ತಂದು ಒಬ್ಬರನ್ನೊಬ್ಬರು ಸೋಲಿಸುವದಕ್ಕೆ ಪ್ರಯತ್ನಿಸುತ್ತಿರುವದನ್ನು ಕಂಡರೆ ಅದೊಂದು ಕುಸ್ತಿಯ ಬಯಲೆಂಬ ಭಾವನೆಯುಂಟಾದೀತು. ಇನ್ನು ಅಲ್ಲಿ ಮನಸ್ಸಿಗೆ ಶಾಂತಿಯು ಸಿಕ್ಕುವ ಆಸೆಯಾದರೂ ಎಲ್ಲಿದ್ದೀತು ?

# ಗ್ರಂಥಪರಿಚಯ

೧. **ಬೃಹದ್ಯೋಗದರ್ಶನ** : (ಪಾತಂಜಲ ಮೂಲಯೋಗಶಿಕ್ಷಣ ಶಿಬಿರದ ಬೆಳ್ಳಿಹಬ್ಬದ ಸವಿನೆನಪಿಗಾಗಿ ಪ್ರಕಟವಾಗಿರುವ ವಿಶೇಷಾಂಕ) ಪ್ರಧಾನ ಸಂಪಾದಕರು : ಪೂಜ್ಯ ಶ್ರೀಶ್ರೀ ರಾಘವೇಂದ್ರಸ್ವಾಮಿಜಿಯವರು; ಪ್ರಕಾಶಕರು : ಅನಾಥ ಸೇವಾಶ್ರಮ ವಿಶ್ವಸ್ತ ಸಮಿತಿ, ಮಲ್ಲಾಡಿಹಳ್ಳಿ- 577531. ಪುಟಗಳು : ಡೆಮ್ಮಿ ೪ಠ ೩೬೦. ಬೆಲೆ : ರೂ. ೩೦.

ಈ ಮಹಾಗ್ರಂಥವು ಕನ್ನಡಭಾಷೆಯ ಹೊರತು ಬೇರೆಯ ಭಾಷೆಯ ಪರಿಚಯವಿಲ್ಲದ, ಹಾಗೂ ಯೋಗದರ್ಶನದ ವಿಷಯಕ್ಕೆ ಸಮಗ್ರವಾದ ಶಾಸ್ತ್ರೀಯವಾದ ವಿಚಾರಗಳನ್ನು ತಿಳಿದುಕೊಳ್ಳಬೇಕೆಂದಿರುವ- ಜಿಜ್ಞಾಸುಗಳಿಗೆ ಕಾಮಧೇನುವಿನಂತಿದೆ. ನಮ್ಮ ಭರತಖಂಡದಲ್ಲಿ ಯೋಗದರ್ಶನವು ಈಗಲೂ ಸಾಂಖ್ಯಾದಿದರ್ಶನಗಳಿಗಿಂತಲೂ ಹೆಚ್ಚು ಜೀವಂತವಾಗಿದ್ದು ಪ್ರಚಾರದಲ್ಲಿದೆ. ವಿದೇಶಗಳಿಗೂ ಇದರ ಪ್ರವೇಶವಾಗಿದ್ದು ತಕ್ಕ ಗೌರವವನ್ನೂ ಸಂಪಾದಿಸಿಕೊಂಡಿದೆ. ಬಹುಮಟ್ಟಿಗೆ ಯೋಗದರ್ಶನಗ್ರಂಥಗಳು ಸಂಸ್ಕೃತಭಾಷೆಯಲ್ಲಿರುವುದರಿಂದ ಆ ಗ್ರಂಥಗಳನ್ನು ಅಧ್ಯಯನಮಾಡಿ ವಿಷಯಗಳನ್ನು ಚೆನ್ನಾಗಿ ಅರಗಿಸಿಕೊಂಡಿರುವ ವಿದ್ವನ್ಮಣಿಗಳೇ ಈ ಸಂಪುಟಕ್ಕೆ ಲೇಖನಗಳನ್ನು ನೀಡಿರುತ್ತಾರೆ. ಎಲ್ಲಾ ಲೇಖನಗಳೂ ಹೊಸಹೊಸ ವಿಷಯಗಳಿಂದ ತುಂಬಿತುಳುಕುತ್ತಿದ್ದು ಬೇರೆಬೇರೆಯ ದೃಷ್ಟಿಕೋನಗಳಿಂದ ಯೋಗದರ್ಶನದ ಪರಿಚಯವನ್ನು ಮಾಡಿಕೊಡುತ್ತಿವೆ. ಕೆಲವು ಲೇಖನಗಳನ್ನು ಹಿಂದಿ, ಇಂಗ್ಲಿಷ್- ಭಾಷೆಗಳಿಂದ ಅನುವಾದಿಸಿ ಪ್ರಕಟಿಸಲಾಗಿದೆ. ಪ್ರಧಾನಸಂಪಾದಕರಾದ 'ತಿರುಕ'ರವರೇ ಒಂಬತ್ತು ಲೇಖನಗಳನ್ನೂ ಯೋಗಪರಂಪರೆಯಲ್ಲಿ ಆಗಿಹೋದ ಭರತಖಂಡದ ಕೆಲವು ಮಹನೀಯರ ಸಂಕ್ಷಿಪ್ತಪರಿಚಯರೂಪವಾದ ಲೇಖನಗಳನ್ನೂ ಒದಗಿಸಿದ್ದಾರೆ. ಈ ಮಹನೀಯರ ಬರವಣಿಗೆಯು ಹೆಚ್ಚಿನ ಅನುಭವಪೂರ್ಣವೂ ಪರಿಣಾಮಕಾರಿಯೂ ಆಗಿರುತ್ತದೆ. ಇವುಗಳ ಜೊತೆಗೆ ಬೇರೆಬೇರೆಯ ವಿದ್ವಾಂಸರುಗಳ ಸುಮಾರು 85 ಲೇಖನಗಳು ಸಂಚಿಕೆಯನ್ನಲಂಕರಿಸಿವೆ. ಇಂಥ ಮಹಾಸಂಪುಟವು ಕನ್ನಡಿಗರ ಸುಯೋಗದಿಂದಲೇ ಪ್ರಕಟವಾಗಿದೆ- ಎಂದರೆ ಅತಿಶಯೋಕ್ತಿಯಾಗಲಾರದು.

ಬಹಳ ಮಟ್ಟಿಗೆ ಲೇಖನಗಳನ್ನು ಅವಲೋಕನಮಾಡಿದ ಅನಂತರ ನಮಗೆ ಕಂಡುಬಂದದ್ದೇನೆಂದರೆ: ಯೋಗದರ್ಶನಕ್ಕೂ ವೇದಾಂತಕ್ಕೂ ಇರುವ ಸಂಬಂಧ, ಹಾಗೂ ವೈದಿಕವಾದ ಯೋಗಸ್ವರೂಪವನ್ನು ಉಪನಿಷತ್ತುಗಳಲ್ಲಿ ಪ್ರತಿಪಾದಿಸಿರುವ ರೀತಿಯಲ್ಲಿಯೇ ತಿಳಿಸುವ ಲೇಖನಗಳು ಹೆಚ್ಚಾಗಿ ಕಂಡುಬರಲಿಲ್ಲ. ಒಂದೆರಡು ಲೇಖನಗಳು ಅಧ್ಯಾತ್ಮ- ಯೋಗಗಳ ಸಮನ್ವಯದಂಥ ವಿಷಯಗಳಿಗೆ ಮೀಸಲಾಗಿವೆಯಾದರೂ ಶ್ರೀ ಶಂಕರರ ಪರಮಗುರುಗಳಾದ ಶ್ರೀ ಗೌಡಪಾದರು ಪ್ರತಿಪಾದಿಸಿರುವ 'ಅಸ್ಪರ್ಶಯೋಗ' ವೆಂಬ ಹೆಸರಿನ ಅಧ್ಯಾತ್ಮಯೋಗವೂ ಅದನ್ನು ಶ್ರೀ ಶಂಕರರು ವಿವರಿಸುವ ರೀತಿಯಲ್ಲಿ ಸ್ವತಂತ್ರವಾಗಿಯೇ ಅದು ಮುಕ್ತಿಗೆ ಸಾಧನವಾಗಿರುವದೆಂದು ತಿಳಿಸುವ ಪ್ರತಿಪಾದನೆಯೂ ಯಾವ ಲೇಖನಗಳಲ್ಲಿಯೂ ಸ್ಪಷ್ಟವಾಗಿ-ಸ್ವಚ್ಛವಾಗಿ ಕಂಡುಬರಲಿಲ್ಲ. ಹೊಳೆನರಸೀಪುರದ ಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರ ವೇದಾಂತಗ್ರಂಥಗಳನ್ನು ಓದಿರುವವರಿಗೆ ಮಾತ್ರ ಈ ವಿಷಯವು ಕೊರತೆಯಾಗಿದ್ದಂತೆ ಕಂಡುಬರುತ್ತದೆ. ಶ್ರೀ ಶ್ರೀಗಳವರ ಶಿಷ್ಯರುಗಳೂ ಈ ಸಂಪುಟಕ್ಕೆ ಲೇಖನಗಳನ್ನು ಬರೆದಿದ್ದಾರಾದರೂ ಈ 'ಅಸ್ಪರ್ಶಯೋಗ'ವನ್ನು ಕೇಂದ್ರೀಕರಿಸಿ ಏನನ್ನೂ ಬರೆದಿಲ್ಲ. ಹೀಗಿದ್ದರೂ

ಇದೇನೂ ಗ್ರಂಥದ ಯೋಗ್ಯತೆಯನ್ನು ತಗ್ಗಿಸಲಾರದು. ಆದರೆ 'ಅಸ್ಪರ್ಶಯೋಗ'ದ ವಿಷಯವಾದ ಲೇಖನಗಳು ಒಂದೆರಡು ಇದ್ದಿದ್ದರೆ ಇನ್ನೂ ಸಮಗ್ರವಾಗಿ ಈ ಸಂಪುಟವು ಮೆರೆಯುತ್ತಿತ್ತು-ಎಂದು ಹೇಳಬಹುದು. ಸಂಪುಟದ ಕಡೆಯಲ್ಲಿ ಅದ್ವೈತ, ವಿಶಿಷ್ಟಾದ್ವೈತ ಮುಂತಾದ ದರ್ಶನಗಳ ಹಾಗೂ ಇಸ್ಲಾಂ ಕ್ರೈಸ್ತ ಧರ್ಮಗಳನ್ನೂ ವೀರಶೈವ- ಜೈನಧರ್ಮಗಳನ್ನೂ ವಿವರಿಸುವ ಉದಾತ್ತಲೇಖನಗಳು ಕಂಗೊಳಿಸುತ್ತಿವೆ. ಈ ಮಹಾಸಂಪುಟದ ಸಿದ್ಧತೆ ಹಾಗೂ ಪ್ರಕಟನೆಗಳಿಗೆ ಶ್ರಮಿಸಿದ ಎಲ್ಲಾ ಮಹನೀಯರಿಗೂ ನಮ್ಮ ಪ್ರಣಾಮಗಳು.

**೨. ಆತ್ಮಾನುಭವದ ಸಾಧನಗಳು : ಬೋಧಕರು : ಶ್ರೀ ಸದ್ಗುರು ಗಣಪತರಾವ ಮಹಾರಾಜರು ; ಪ್ರಕಾಶಕರು : ಶ್ರೀ॥ ವೆಂಕಟೇಶ ಯಜಮಾನ, ಗೌರವ ಕಾರ್ಯದರ್ಶಿ, ಅಧ್ಯಾತ್ಮಭಾಂಡಾರ, ಶಾಂತಿಕುಟೀರ, ಕನ್ನೂರ ( ಜಿಲ್ಲಾ ಬಿಜಾಪುರ ). ಪುಟಗಳು ಕ್ರೌನ್ 1/8 ರ ೯೨; ಬೆಲೆ ರೂ. ೬-೦೦.**

ಈ ಗ್ರಂಥದಲ್ಲಿ ಪೂಜ್ಯ ಮಹಾರಾಜರು ದಯಪಾಲಿಸಿರುವ ಎಂಟು ಪ್ರವಚನಗಳ ಸಾರವನ್ನು ಸಂಗ್ರಹಿಸಿಕೊಡಲಾಗಿದೆ. ಪ್ರಕಾಶಕರು ತಿಳಿಸಿರುವಂತೆ ಪ್ರವಚನಗಳನ್ನು ಟೇಪ್‌ರೆಕಾರ್ಡರ್ ಯಂತ್ರದಿಂದ ಸಂಗ್ರಹಿಸಿ ಅನಂತರ ಬರವಣಿಗೆಯ ಭಾಷೆಗೆ ಅಳವಡಿಸಿ ಈ ಪುಸ್ತಕದಲ್ಲಿ ಕೊಡಲಾಗಿದೆ. ಪ್ರತಿಯೊಂದು ಪ್ರವಚನಕ್ಕೂ ಶೀರ್ಷಿಕೆಯನ್ನು ಕೊಟ್ಟಿರುವುದಲ್ಲದೆ ಆಯಾ ಪ್ರವಚನಗಳಲ್ಲಿ ಪ್ರತಿಪಾದಿತವಾಗಿರುವ ವಿಷಯಗಳನ್ನೆಲ್ಲ ಪ್ರಾರಂಭದಲ್ಲಿ ಟಿಪ್ಪಣಿಮಾಡಿ ಅಳವಡಿಸಲಾಗಿದೆ. ಗ್ರಂಥಶರೀರವನ್ನು ಅವಲೋಕಿಸಿದಾಗ ಜನಸಾಮಾನ್ಯರಿಗೂ ತಿಳಿಯುವಂಥ ಸರಳವಾದ ಬೋಧನಕ್ರಮ, ಉದಾಹರಣೆಗಳ ಒಗ್ಗರಣೆ, ಹಾಗೂ ಸಮನ್ವಯಗಳಿಂದ ಅಧ್ಯಾತ್ಮವನ್ನು ಸುಲಭಮಾಡಲಾಗಿದೆ. ವಿಷಯಪ್ರತಿಪಾದನೆಯಲ್ಲಿ ಸಿದ್ಧಾಂತಸಾಧನಗಳು ಸಮರಸವಾಗಿಯೇ ನಿರೂಪಿಸಲ್ಪಟ್ಟಿವೆ. ಸಾಮಾನ್ಯ ಮನುಷ್ಯರಿಗೆ ಮಾಡಲು ಸಾಧ್ಯವಾಗದಂ ಯಾವದೇ ಸಾಧನವನ್ನೂ ಇಲ್ಲಿ ಹೇಳಿಲ್ಲ. ಸದ್ಗುರುಮಹಾರಾಜರ ಸರಳತೆ-ಪ್ರೇಮವಾತ್ಸಲ್ಯಗಳು ಪ್ರವಚನಗಳಲ್ಲೆಲ್ಲ ಹರಿದಾಡಿವೆ. ಗ್ರಂಥಕ್ಕೆ ನಮ್ಮ ಸುಸ್ವಾಗತ.

**೩. ಪಂಡಿತ ಜವಾಹರಲಾಲ ನೆಹರು : ಲೇಖಕರು : ಶ್ರೀ ದತ್ತಾತ್ರೇಯ ಕರಮರಕರ-ಹಾಗೂ ಕುಟುಂಬದವರು: ಪ್ರಕಾಶಕರು: ಡಿ. ಎಸ್. ಫಡಕೆ, ಅರ್ಥಶಾಸ್ತ್ರಸಂಶೋಧನಸಂಸ್ಥೆ, ವಿದ್ಯಾಗಿರಿ; ಧಾರವಾಡ-4. ಪುಟಗಳು: ಕ್ರೌನ್ ೩೦. ಬೆಲೆ ರೂ. ೩.**

ಈ ಚಿಕ್ಕ ಪುಸ್ತಿಕೆಯಲ್ಲಿ ಸುಮಾರು ಹನ್ನೆರಡು ವರ್ಷಗಳ ಕಾಲ ದಿ॥ ನೆಹರುರವರ ಸಂಪುಟದಲ್ಲಿ ಮಂತ್ರಿಗಳಾಗಿದ್ದ ಲೇಖಕರು ತಮ್ಮ ಹಾಗೂ ತಮ್ಮ ಪತ್ನಿ-ಪುತ್ರ-ಪುತ್ರಿಯರೊಡನೆ ನೆಹರುರವರು ನಡೆದುಕೊಂಡ ರೀತಿಯ ಸವಿನೆನಪುಗಳನ್ನು ಚಿತ್ರಿಸಿದ್ದಾರೆ. ವಿದೇಶೀಯ ಸಂಸ್ಕೃತಿಯನ್ನೇ ತಮ್ಮ ಬಹಿರಂಗಜೀವನದಿಂದ ಪ್ರಕಟಿಸುತ್ತಿದ್ದ ಶ್ರೀ ನೆಹರೂರವರು ಅಂತರ್ಯದಲ್ಲಿ ಮಾತ್ರ ಸರಳತೆ, ಪ್ರೇಮ, ತ್ಯಾಗ, ಔದಾರ್ಯಾದಿ ಆತ್ಮಗುಣಗಳ ಗನಿಯೇ ಆಗಿದ್ದರೆಂಬುದು ಇಲ್ಲಿರುವ ಬರವಣಿಗೆಯಿಂದ ಕಂಡುಬರುತ್ತದೆ. ಶ್ರೀ ನೆಹರೂರವರ ಗುಣಗಳಲ್ಲಿ ಏಕದೇಶವನ್ನು ಎತ್ತಿ ತೋರಿಸುವ ಈ ಪುಸ್ತಕವು ಸ್ವಾಗತಾರ್ಹವಾಗಿದೆ.

---

# ಉಪಾಕರ್ಮ-೨

(ಸಂಪಾದಕ)

ಈಗ ಉತ್ಸರ್ಜನಾನಂತರ ಉಪಾಕರ್ಮವನ್ನು ಕುರಿತು ವಿಚಾರಮಾಡೋಣ. ಪ್ರಾರಂಭದಲ್ಲಿ "ಅಧ್ಯೇಷ್ಯಮಾಣಾನಾಂ ಛಂದಸಾಂ ಸವೀರ್ಯವತ್ತ್ವಾಯ" ಎಂದು ಸಂಕಲ್ಪವನ್ನು ಹೇಳುವ ರೂಢಿಯಿದೆ. ವೇದಗಳ ಅಧ್ಯಯನವು ಮುಂದೆ ವೀರ್ಯವತ್ತಾಗುವದಕ್ಕಾಗಿ 'ಉಪಾಕರ್ಮ'ವೆಂದು ಇದರ ಅರ್ಥ. ಕಲಿತಿರುವ ಹಾಗೂ ಕಲಿಯಲಿರುವ ಎರಡೂ ವೇದಭಾಗಗಳೂ ಉತ್ಸರ್ಜನೋಪಾಕರ್ಮಗಳಿಂದ ಹೀಗೆ ವೀರ್ಯವತ್ತಾಗಬೇಕು. ಏಕೆಂದರೆ ಕಲಿತಿರುವ ವೇದಗಳನ್ನೂ ಮರೆಯಬಾರದು. ಮರೆತರೆ ದೋಷವುಂಟು. ಆದರೆ ಹಾಗೆ ಮರೆಯದೇ ಇರಬೇಕಾದರೆ ಮತ್ತೆ ಮತ್ತೆ ವೇದಮಂತ್ರಗಳನ್ನು ಆವರ್ತಿಮಾಡುತ್ತಿರಬೇಕು. ವೇದಾಧ್ಯಯನಕ್ಕೆ ಧಾರಣಾಶಕ್ತಿಯು ಹೆಚ್ಚು ಅಗತ್ಯ. ಅದನ್ನೇ 'ಮೇಧಾ' ಎಂದೂ ಕರೆಯುವರು. ಇಡಿಯ ವೇದವನ್ನೆಲ್ಲ ಕಂಠಸ್ಥವಾಗಿಟ್ಟುಕೊಂಡು ಗುರುಶಿಷ್ಯಪರಂಪರೆಯಿಂದ ಸಾವಿರಾರು ವರ್ಷಗಳಿಂದಲೂ ಋಷಿಗಳು ಈ ಪವಿತ್ರ ಸಾಹಿತ್ಯವನ್ನು ಕಾಪಾಡಿಕೊಂಡುಬಂದಿರುವದರಿಂದಲ್ಲೇ ಇವು ಶ್ರುತಿಗಳೆನಿಸಿವೆ. ಈಗಲೂ ಇವು ಹೀಗೆಯೇ ಮುಂದುವರಿಯಬೇಕಾಗಿದೆ. ಇದಕ್ಕಾಗಿ ಉಪಾಕರ್ಮ (ವೇದಸ್ವೀಕಾರ)ವು ವಿಧಿಸಲ್ಪಟ್ಟಿದೆ. ಆದ್ದರಿಂದ ಉಪಾಕರ್ಮದ ದಿನ ಆರಂಭಿಸಿದ ಅಧ್ಯಯನವು ಮುಂದೆ ಪ್ರತಿದಿನವೂ ನಡೆಯಬೇಕು-ಎಂಬಿದು ಋಷಿಗಳ ಅಪ್ಪಣೆಯಾಗಿದೆ. ಸದ್ಯಕ್ಕೆ ನಾವು ಕೆಲವೇ ವೇದಮಂತ್ರಗಳನ್ನಾದರೂ ಕಲಿತು ಅವುಗಳನ್ನು ಧಾರಣೆಮಾಡಿಕೊಳ್ಳುವದು ಮುಖ್ಯಕರ್ತವ್ಯವಾಗಿದೆ.

ಉಪಾಕರ್ಮದಲ್ಲಿಯೂ ಉತ್ಸರ್ಜನದಂತೆಯೇ ಋಷಿಪೂಜಾ-ತರ್ಪಣಗಳು ಸಮಾನವಾಗಿರುತ್ತವೆ. ಹೋಮವೂ ಒಂದೇ ರೀತಿಯದಾಗಿರುತ್ತದೆ. ಆದರೆ ಋಗ್ವೇದಿಗಳಲ್ಲಿ ಮಾತ್ರ ಉಪಾಕರ್ಮದಲ್ಲಿ ಮೊಸರು-ಅಕ್ಕಿ ಹಿಟ್ಟುಗಳನ್ನು ಕಲಸಿ ಹೋಮಮಾಡುತ್ತಾರೆ. ಅನಂತರ ಅದರ ಶೇಷವನ್ನು ಪ್ರಾಶನಮಾಡುತ್ತಾರೆ. ಉಪಾಕರ್ಮದಲ್ಲಿ ವಿಶೇಷವಾಗಿ ಯಜ್ಞೋಪವೀತಹೋಮ-ದಾನ-ಧಾರಣಗಳು ಸೇರಿವೆ. ಇದು ಉತ್ಸರ್ಜನದಲ್ಲಿಯೂ ಉಂಟಾದರೂ ಒಂದೇ ದಿನ ಉತ್ಸರ್ಜನೋಪಾಕರ್ಮಗಳನ್ನು ಈಗಿನ ಕಾಲದಲ್ಲಿ ಮಾಡುವದರಿಂದ ಅಗ್ಗ ಕೈಬಿಡುತ್ತಾರೆ. ಉಪಾಕರ್ಮದಲ್ಲಿ ಕಡ್ಡಾಯವಾಗಿ ಎಲ್ಲರೂ ಅನುಷ್ಠಿಸುತ್ತಾರೆ. ಪ್ರಕೃತ ಯಜ್ಞೋಪವೀತದ ವಿಷಯವನ್ನು ಸ್ವಲ್ಪ ವಿಚಾರಮಾಡೋಣ. (ಈ ವಿಷಯಕ್ಕೆ ಹೆಚ್ಚಿನ ವಿವರವನ್ನು 'ಅಧ್ಯಾತ್ಮಪ್ರಕಾಶ'ದ 1981ನೇ ಜುಲೈ ಸಂಚಿಕೆಯ ಪುಟ ೨೬೨ರಲ್ಲಿ ಕೊಡಲಾಗಿದೆ). ಇದು ಶಿಷ್ಟಾಚಾರವೆಂತ ಕಂಡುಬರುತ್ತದೆ. ಚರ್ಮವನ್ನಾಗಲೀ, ಬಟ್ಟೆಯನ್ನಾಗಲೀ ಎಡಹೆಗಲಮೇಲಿನಿಂದ ಬಲಕ್ಕೆ ಬರುವಂತೆ ಧರಿಸಿ ಎಡಭುಜದ ಮೇಲಿನಿಂದ ಇಳಿಬಿಡಬೇಕು-ಎಂದು ವೇದದಲ್ಲಿದೆ. ಅದನ್ನು ಈಗ ಮೂರೆಳೆಯ

ದಾರದಿಂದ ತಯಾರಿಸಿ ಧರಿಸುತ್ತಾರೆ. ಇದೇ ಯಜ್ಞೋಪವೀತವೆನಿಸಿದೆ. ಪರಮಾತ್ಮನಿಗೆ- ಎಂದು ಹೇಳಿ ಯಜ್ಞೋಪವೀತಹೋಮವನ್ನು ನೆರವೇರಿಸಿ ಅನಂತರ ಬ್ರಾಹ್ಮಣರಿಗೆಲ್ಲ ದಕ್ಷಿಣೆಸಹಿತ ಜನಿವಾರವನ್ನು ದಾನಮಾಡುತ್ತಾರೆ. ದಾನಕ್ಕೆ ಉಪಯೋಗಿಸುವ ಮಂತ್ರವು ಹೀಗಿದೆ:-

ಯಜ್ಞೋಪವೀತಂ ಸೌವರ್ಣಂ ಸರ್ವಾನುಷ್ಠಾನಸಾಧನಮ್ ।
ತಸ್ಮಾದಸ್ಯ ಪ್ರದಾನೇನ ಅತಃ ಶಾಂತಿಂ ಪ್ರಯಚ್ಛ ಮೇ ॥

"ಒಳ್ಳೆಯ ಶುಭ್ರವರ್ಣದ, ಎಲ್ಲಾ ಅನುಷ್ಠಾನಗಳಿಗೂ ಸಾಧನವಾದ ಯಜ್ಞೋಪವೀತದ ದಾನದಿಂದ (ಎಲೈ ಭಗವಂತನೆ), ನನಗೆ ಮನಶ್ಶಾಂತಿಯನ್ನು ಕೊಡು" ಎಂದು ಇದರ ಅರ್ಥ. ಹೀಗೆ ದಾನಮಾಡಿದ ಅನಂತರ ಯಜ್ಞೋಪವೀತಶುದ್ಧಿಗಾಗಿ ಹತ್ತುಬಾರಿ ಗಾಯತ್ರೀಮಂತ್ರವನ್ನು ಯಜ್ಞೋಪವೀತವನ್ನು ಕೈಯಲ್ಲಿ ಹಿಡಿದೇ ಜಪಿಸುವ ವಾಡಿಕೆಯಿದೆ. ಅನಂತರ ಬ್ರಹ್ಮಚಾರಿಗಳು ಒಂದನ್ನು, ಗೃಹಸ್ಥರು ಎರಡು ಅಥವಾ ಮೂರು ಜನಿವಾರಗಳನ್ನು ಧರಿಸಿಕೊಂಡು ಆಚಮನಮಾಡುತ್ತಾರೆ. ಅನಂತರ ಉತ್ಸರ್ಜನದಂತೆಯೇ ಬ್ರಹ್ಮಯಜ್ಞವು ಆರಂಭವಾಗುತ್ತದೆ. ಅದರ ಕಡೆಯಲ್ಲಿ "ಉಪಾಕೃತಾ ವೈ ವೇದಾಃ" (ವೇದಗಳು ಸ್ವೀಕರಿಸಲ್ಪಟ್ಟವು) ಎಂದು ಪ್ರತಿಜ್ಞೆಯನ್ನು ಮಾಡಿ ಕರ್ಮವನ್ನು ಪೂರ್ಣಗೊಳಿಸುವರು. ಅನಂತರ ದೇವ-ಋಷಿ ಪಿತೃತರ್ಪಣಗಳನ್ನು ಮಾಡುತ್ತಾರೆ. ತರ್ಪಣದ ವಿಷಯವಾಗಿ ಹಿಂದಿನ ಲೇಖನದಲ್ಲಿ ಸ್ಥಲಸಂಕೋಚದಿಂದ ಪ್ರಸ್ತಾಪಿಸಲಾಗದೆ ಇರುವ ವಿಷಯವನ್ನು ಈಗ ತಿಳಿಸುವೆನು.

ತರ್ಪಣ ಎಂಬಿದೊಂದು ವೈದಿಕಕರ್ಮವು. ಆಯಾ ದೇವತೆ-ಪಿತೃ-ಅಥವಾ ಋಷಿಗಳನ್ನು ಪ್ರೀತಿಗೊಳಿಸುವದು- ಎಂದು ಇದರ ಅರ್ಥ. ಈ ಸಂದರ್ಭದಲ್ಲಿ ದೇವತೆಗಳಿಗೆ ಮೊದಲು ತರ್ಪಣಮಾಡಲಾಗುವದು. ಆಗ್ಗೆ ಜನಿವಾರವು ಎಡಹೆಗಲಮೇಲೆ ಇರುತ್ತದೆ. ಇದನ್ನು 'ಸವ್ಯ ಅಥವಾ ಉಪವೀತ'- ಎಂದು ಕರೆಯುತ್ತಾರೆ. ದೇವತೆಗಳಿಗೆ ಅರ್ಪಿಸುವಾಗ 'ತರ್ಪಯಾಮಿ' ಎಂದು ಒಂದು ಬಾರಿ ಮಾತ್ರ ಹೇಳುವರು. ಎರಡನೆಯದಾಗಿ ಋಷಿತರ್ಪಣ. ಈ ಋಷಿಗಳೆಂಬವರು ಋಗ್ವೇದಿಗಳಲ್ಲಿ ಹೆಚ್ಚು ಜನರಿದ್ದಾರೆ. ಅವರ ಹೆಸರುಗಳನ್ನೆಲ್ಲ ಪ್ರಯೋಗಗ್ರಂಥಗಳಲ್ಲಿ ವಿವರವಾಗಿ ಕೊಡಲಾಗಿದೆ. ಋಷಿತರ್ಪಣಮಾಡುವಾಗ 'ನಿವೀತ'ವಾಗಿ ಯಜ್ಞೋಪವೀತವಿರಬೇಕು. ನಿವೀತವೆಂದರೆ ಹೂಮಾಲೆಯನ್ನು ಕೊರಳಲ್ಲಿ ಧರಿಸಿದಂತೆ ಹಾಕಿಕೊಳ್ಳುವದೆಂದರ್ಥ. ಸಾಮಾನ್ಯವಾಗಿ ಋಷಿಗಳಿಗೆ ತರ್ಪಯಾಮಿ ಎಂದು ಎರಡು ಬಾರಿ ಹೇಳುವ ಪದ್ಧತಿಯಿದೆ. ಮೂರನೆಯದಾಗಿ ಪಿತೃತರ್ಪಣವು. ಪಿತೃಗಳೆಂಬವರೂ ದೇವತೆಗಳಲ್ಲಿಯೇ ಒಂದು ಗುಂಪಿನವರು. ಆದ್ದರಿಂದ ಸರ್ವರಿಗೂ ಸಮಾನರಾದ ಈ ಪಿತೃಗಳಿಗೆ ತಂದೆತಾಯಿಗಳಿರುವವರೂ ತರ್ಪಣಮಾಡಬೇಕು. ಆಗ್ಗೆ ಜನಿವಾರವನ್ನು ಜೀವತ್ ಪಿತೃಕರು ಎಡಗೈಹೆಬ್ಬೆಟ್ಟಿಗೆ ಮಾತ್ರ ಸಿಕ್ಕಿಸಿಕೊಳ್ಳುತ್ತಾರೆ. ಉಳಿದವರು ಪೂರ್ತಿಯಾಗಿ ಬಲಹೆಗಲಿನಿಂದ ಕೆಳಗೆ ಎಡಗೈ ದಾಟಿ ಇಳಿಯಬಿಡುವರು. ಇದನ್ನು

'ಪ್ರಾಚೀನಾವೀತ'ವೆಂದು ಕರೆಯುವರು. ಪಿತೃಗಳಿಗೆ ತರ್ಪಣಮಾಡುವಾಗ ಮೂರು ಬಾರಿ 'ತರ್ಪಯಾಮಿ' ಎಂದು ಹೇಳುತ್ತಾರೆ. ಸರ್ವರಿಗೂ ಸಮಾನರಾದ ಪಿತೃಗಳಿಗೆ ತರ್ಪಣಮಾಡಿದಮೇಲೆ ಆಯಾ ಜನರು ತಮ್ಮತಮ್ಮ ಮಾತಾಪಿತೃಗಳಿಗೂ ತರ್ಪಣ ಮಾಡುವರು.

ಈಗ ಯಜುರ್ವೇದಿಗಳಲ್ಲಿ ಮಾತ್ರ ಉಪಾಕರ್ಮದ ಕಡೆಯಲ್ಲಿ ಅನುಷ್ಠಿಸಲ್ಪಡುವ 'ವಿರಜಾಹೋಮ'ವನ್ನು ವಿಚಾರಮಾಡೋಣ. ರಜ- ಎಂದರೆ ಪಾಪವು. ಪಾಪ ಪರಿಹಾರಕ್ಕಾಗಿ ಮಾಡುವ ಈ ಹೋಮವನ್ನು, ಮಹಾಜನರೆಲ್ಲರ ಇಡಿಯ ವರ್ಷದ ಅವಧಿಯಲ್ಲಿ ಸಂಭಾವಿಸಿರುವ ಪಾಪಗಳ ಪರಿಹಾರಕ್ಕಾಗಿಯೇ ಮಾಡಲಾಗುವದೆಂತ ಸಂಕಲ್ಪವನ್ನು ಪಠಿಸುತ್ತಾರೆ. ಅಕ್ಕಿಯಹಿಟ್ಟು, ಎಳ್ಳು, ಬೆಲ್ಲ, ತುಪ್ಪಗಳನ್ನು ಕಲೆಯಿಸಿ ಹೋಮಮಾಡಿ ಅನಂತರ ಹಿಟ್ಟನ್ನು ಪ್ರಸಾದವಾಗಿ ಸ್ವೀಕರಿಸುವರು. ಉಭಯಶಾಖೆಗಳವರೂ ಈ ದಿನ ಹಿಟ್ಟನ್ನು ಉಪಯೋಗಿಸುವದರಿಂದ ಕಡೆಯಲ್ಲಿ ಈ 'ಸಕ್ತು'ವನ್ನು ಎಲ್ಲರಿಗೂ ಕೊಡುತ್ತಾರೆ. ಬಾಯಿರುಚಿಗಾಗಿ ತೆಂಗಿನಕಾಯಿ, ಉಳಿದ ಹಣ್ಣುಗಳನ್ನೂ ಸೇರಿಸಿ ಸಿದ್ಧಗೊಳಿಸುತ್ತಾರೆ. ಕೆಲವರಂತೂ ತಾವು ಋಗ್ವೇದ ವೊ, ಯಜುರ್ವೇದವೊ- ಎಂಬಿದನ್ನು ಕೂಡ ನೆನಪಿಟ್ಟುಕೊಳ್ಳಲಾರದೆ 'ನಮ್ಮದು ಮೊಸರು- ಹಿಟ್ಟು', 'ನಮ್ಮದು ಬೆಲ್ಲ-ಹಿಟ್ಟು' ಎಂದು ಹೇಳುತ್ತಾರೆ. ಆ ಸಂಕೇತ ದಿಂದ ಅವರವರ ವೇದಶಾಖೆಗಳನ್ನು ಗೊತ್ತುಮಾಡುವಂಥ ಹೀನಸ್ಥಿತಿಗೆ ನಾವು ಬಂದಿರುತ್ತೇವೆ. ಬ್ರಾಹ್ಮಣರ ಗತಿಯೇ ಹೀಗಾದರೆ ಉಳಿದವರು ಇವರ ಆದರ್ಶ ವನ್ನು ಪಡೆಯಲು ಅವಕಾಶವಾದರೂ ಎಲ್ಲಿದೆ? ಪ್ರಕೃತ- ವಿರಜಾಹೋಮದ ಮಂತ್ರ ಗಳ ಅರ್ಥವನ್ನು ನಾವು ಚೆನ್ನಾಗಿ ವಿಚಾರಮಾಡಬೇಕಾಗಿದೆ. ಈ ಮಂತ್ರಗಳು ತೈತ್ತಿರೀಯೋಪನಿಷತ್ತಿನ 'ಮಹಾನಾರಾಯಣಪನ್ನ'ದಲ್ಲಿ ಬರುತ್ತವೆ. ಒಟ್ಟು ತಾತ್ಪರ್ಯವು ಹೀಗಿದೆ: "ತಿಲಹೋಮವನ್ನು ಸಕ್ತುವಿನೊಡನೆ ಮಾಡುವ ನಮಗೆ ಪಾಪಗಳು ಪರಿಹಾರವಾಗಲಿ; ಧನಕನಕಾದಿಲಕ್ಷ್ಮಿಯು ಕೈಸೇರಲಿ; ಹಸಿವು ಬಾಯಾರಿಕೆಗಳು ಅತಿಯಾಗಿ ಬಾಧಿಸದೆ ಇರಲಿ; ಬ್ರಹ್ಮಹತ್ಯಾದಿ ಮಹಾಪಾಪಗಳು ನಮ್ಮನ್ನು ಬಿಟ್ಟು ತೊಲಗಲಿ; ನಾವು ವಾಸಿಸುತ್ತಿರುವ ಪೃಥಿವ್ಯಾದಿಗಳು, ಸೇವಿಸು ತ್ತಿರುವ ಶಬ್ದಸ್ಪರ್ಶಾದಿಗಳು, ಶರೀರವನ್ನಾಶ್ರಯಿಸಿರುವ ಚಕ್ಷುರಾದಿ ಇಂದ್ರಿಯಗಳು, ವಾಗಾದಿಗಳು, ಶರೀರಾವಯವಗಳು ಇವೆಲ್ಲವೂ ಶುದ್ಧವಾಗಲಿ; ನಮ್ಮ ಆತ್ಮ, ಅಂತರಾತ್ಮಗಳು ಪರಿಶುದ್ಧವಾಗಲಿ! ಅನ್ನಮಯಾದಿಕೋಶಗಳೂ ಪವಿತ್ರವಾಗಲಿ!" ಇವೇ ಮುಂತಾದ ವಿವರಗಳಿಂದ ಕೂಡಿದ ಮಂತ್ರಗಳು ಕಿವಿಗೂ ಹೃದಯಕ್ಕೂ ಇಂಪಾಗಿರುವವು. ಈ ಹೋಮದ ಅನಂತರ ಉತ್ತರಪೂಜಾದಿಗಳೊಡನೆ ಉಪಾ ಕರ್ಮವು ಪೂರೈಸುವದು.

ವಾಚಕರೆ, ಈಗಲಾದರೂ ನೀವು ಏನೇ ಕೆಲಸಕಾರ್ಯಗಳಿದ್ದರೂ ತಪ್ಪದೆ ವರ್ಷಕ್ಕೊಮ್ಮೆ ಉಪಾಕರ್ಮವನ್ನು ನೆರವೇರಿಸಿ ಕೃತಕೃತ್ಯರಾಗಿರಿ.

---

# ಮಾನವತೆಗೆ ಅದ್ವೈತದ ಕೊಡುಗೆ

(ಸಂಪಾದಕ)

ನಮ್ಮ ಭರತಖಂಡದ ಸಂಸ್ಕೃತಿಯ ಗನಿಗಳಾದ ವೇದ-ಪುರಾಣ ಇತಿಹಾಸಗಳಲ್ಲಿ ಮಾನವನೆಂದರೆ ಯಾರು ? ಎಂಬಿದನ್ನು ಚೆನ್ನಾಗಿ ವಿವೇಚಿಸಿ ತಿಳಿಸಿದ್ದಾರೆ. ಪ್ರತ್ಯಕ್ಷಪ್ರಮಾಣದಿಂದ ಕಂಡುಬರುವ, ಮನುಷ್ಯಶರೀರಧಾರಿಯಾದ ವ್ಯಕ್ತಿಯೇ ಮಾನವನು-ಎಂಬಿಷ್ಟನ್ನೇ ಶಾಸ್ತ್ರಗಳು ಒಪ್ಪಿರುವದಿಲ್ಲ. ಶರೀರದ ಜೊತೆಗೆ ಅಂತಃಕರಣವೂ, ಅದಕ್ಕೆ ಹೊಂದಿಕೊಂಡಂತೆ ದೈವೀಗುಣಗಳೂ ಇರುವವನನ್ನೇ ಮಾನವ, ಪುರುಷ-ಎಂದು ಅಲ್ಲಿ ಕರೆದಿರುತ್ತದೆ. ಮಾನವನ ಸೃಷ್ಟಿಯ ವಿಷಯಕ್ಕೆ ಉಪನಿಷತ್ತಿನಲ್ಲಿ ಈ ವರ್ಣನೆಯಿದೆ: "ಆತ್ಮನಿಂದ ಆಕಾಶವು ಹುಟ್ಟಿತು. ಆಕಾಶದಿಂದ ಕ್ರಮವಾಗಿ ವಾಯು, ತೇಜಸ್ಸು, ಜಲ, ಪೃಥ್ವಿಗಳೂ ಅನಂತರ ಪೈರುಗಳೂ ಅನ್ನವೂ ಅನ್ನದಿಂದ ಪುರುಷನೂ ಹುಟ್ಟಿರುತ್ತಾನೆ." ಈ ವಿವರಣೆಯು ತೈತ್ತಿರೀಯೋಪನಿಷತ್ತಿನಲ್ಲಿದೆ. ಅಲ್ಲಿ ಶ್ರೀ ಶಂಕರಾಚಾರ್ಯರು ವ್ಯಾಖ್ಯಾನಮಾಡಿರುವದು ಹೇಗೆಂದರೆ: "ಎಲ್ಲಾ ಚೇತನಾಚೇತನವಸ್ತುಗಳೂ ಬ್ರಹ್ಮದಿಂದಲೇ ಹುಟ್ಟಿಬಂದು ಬ್ರಹ್ಮವಂಶಕ್ಕೇ ಸೇರಿದ್ದರೂ ಶ್ರುತಿಯು ಪುರುಷನನ್ನೇ ಏಕೆ ಗ್ರಹಿಸಿದೆ ? ಎಂದರೆ ಬ್ರಹ್ಮದ ಆವಿರ್ಭಾವವು ಮನುಷ್ಯನಲ್ಲಿ ಪೂರ್ಣವಾಗಿರುವದರಿಂದ- ಎಂದು ತಿಳಿಯಬೇಕು. ಪುರುಷನು ತಿಳಿವಳಿಕೆಯಿಂದ ಕೂಡಿದವನಾಗಿದ್ದು ಮಾತನಾಡುವದು, ನೋಡುವದು, ಕೇಳುವದು-ಮುಂತಾದ ವ್ಯವಹಾರಗಳ ಜೊತೆಗೆ, ನಾಳೆಗೇನು ? ವಯಸ್ಸಾದ ಮೇಲೆ ಹೇಗೆ? ಈ ಶರೀರವನ್ನು ಬಿಟ್ಟ ಅನಂತರವೂ ಜನ್ಮಾಂತರಲೋಕಾಂತರಗಳಲ್ಲಿಯೂ ಸುಖವಾಗಿರುವದು ಹೇಗೆ ? ಮುಂತಾದ ರೀತಿಯ ಆಲೋಚನೆಯೂ ವಿವೇಕವೂ ಉಳ್ಳವನಾಗಿರುತ್ತಾನೆ. ಉಳಿದ ಪಶುಪಕ್ಷಿಗಳಿಗಾದರೊ, ಹಸಿವು ಬಾಯಾರಿಕೆಗಳ ವಿಷಯಗಳನ್ನು ಬಿಟ್ಟರೆ ವಿವೇಕವಾಗಲಿ, ಜ್ಞಾನವಾಗಲಿ ಇರುವದಿಲ್ಲ; ಆದ್ದರಿಂದಲೇ ಶ್ರುತಿಯು ಅನ್ನದಿಂದ ಪುರುಷನು ಹುಟ್ಟಿದನು-ಎಂದು ಪ್ರಧಾನವಾಗಿ ತಿಳಿಸಿದೆ-"ಎಂದು ಅಭಿಪ್ರಾಯಪಟ್ಟಿರುತ್ತಾರೆ.

ಮನುಸ್ಮೃತಿ ಮುಂತಾದ ಆಕರಗ್ರಂಥಗಳಲ್ಲಿಯೂ 'ಭೂತಾನಾಂ ಪ್ರಾಣಿನಃ ಶ್ರೇಷ್ಠಾಃ ಪ್ರಾಣಿನಾಂ ಬುದ್ಧಿಜೀವಿನಃ' ಎಂದು ತಿಳಿಸಿ ಮನುಷ್ಯ-ಅವನಲ್ಲಿಯೂ ವಿದ್ಯಾವಂತ-ಅವನಲ್ಲಿಯೂ ಜಾಣ-ಜಾಣನಲ್ಲಿಯೂ ಬ್ರಹ್ಮಜ್ಞಾನಿ-ಹೀಗೆ ಉತ್ತರೋತ್ತರವಾಗಿ ಶ್ರೇಷ್ಠರಾರೆಂಬುದನ್ನು ತಿಳಿಸಿದೆ. ವಿಚಾರಮಾಡಿದಂತೆಲ್ಲ ಮಾನವನ ಆಕಾರಕ್ಕಿಂತಲೂ ಅಂತರಂಗದ ಸಂಸ್ಕೃತಿಯೇ ನಿಜವಾದ ಮಾನವತೆಯೆಂದು ಸಿದ್ಧವಾಗುತ್ತದೆ. ಇದನ್ನೇ ನಾಗರಿಕತೆ-ಎಂದೂ ಐತಿಹಾಸಿಕರು ಕರೆದಿದ್ದಾರೆ. ಆದ್ದರಿಂದ ಮಾನವನ ಅಪೂರ್ವ ಆಸ್ತಿಯಾದ ಅಂತರಂಗದ ಸಂಸ್ಕೃತಿಯ ನಿಜವಾದ ಗುರಿಯು ಯಾವದೆಂಬುದನ್ನು ಈಗ ವಿಚಾರಮಾಡಬಹುದಾಗಿದೆ.

ಅಂತಃಕರಣವೇನೊ, ಮಾನವನಿಗೆ ವಿಶೇಷಕೊಡುಗೆಯಾಗಿ ಪರಬ್ರಹ್ಮದಿಂದ ದೊರಕಿರುವದು ನಿಜವಾದರೂ ಈಗಿನ ಕಾಲಕ್ಕೆ ಅದನ್ನು ಮನುಷ್ಯನು ಸರಿಯಾಗಿ

ಉಪಯೋಗಿಸಿಕೊಳ್ಳುತ್ತಿಲ್ಲ. ಹೆಸರು ಅಂತಃಕರಣ-ಒಳಗಿನ ಸಾಧನವೆಂದು ಇದ್ದರೂ ಬಹಳಮಟ್ಟಿಗೆ ಅದನ್ನು ಹೊರಗಿನ ಕರಣವಾಗಿಯೇ ಬಳಸಿಕೊಳ್ಳುವದು ಮಾನವನಿಗೆ ಒಗ್ಗಿಹೋಗಿದೆ. ಇದಕ್ಕೆ ಕಾರಣವೇನೆಂದರೆ ಈ ಸೂಕ್ಷ್ಮವಾದ ಇಂದ್ರಿಯವು ಆತ್ಮನಿಗೂ ಚಕ್ಷುರಾದಿಗಳಿಗೂ ನಡುವೆ ಇದ್ದುಕೊಂಡಿದೆ. ಸ್ವಭಾವದಿಂದಲೇ ಇಂದ್ರಿಯಗಳು ಹೊರಮುಖವಾಗಿ ಸೃಷ್ಟಿಸಲ್ಪಟ್ಟಿರುವದರಿಂದ ಅವುಗಳನ್ನು ಹಿಂಬಾಲಿಸಿರುವ ಇದುಕೂಡ ಬಹಿರ್ಮುಖವಾಗಿಯೇ ಪ್ರವರ್ತಿಸುತ್ತಿರುವದು ಸಹಜವಾಗಿದೆ. ಇದರ ಪರಿಣಾಮವಾಗಿಯೇ ಹೊರಗಿನ ಪ್ರಪಂಚದ ಸಂಬಂಧವೇ ಅಂತಃಕರಣಕ್ಕೆ ಹೆಚ್ಚಾಗಿದ್ದು ತನಗೂ ಹಿಂತಡಿಕೆಯಾಗಿರುವ ಆತ್ಮನನ್ನು ಕಂಡುಕೊಳ್ಳುವ ವಿಷಯಕ್ಕೆ ಇದು ಅಸಮರ್ಥವಾಗಿಬಿಟ್ಟಿದೆ. ಒಳಗೆ ನೋಡುವದೆಂಬುದು ಇದಕ್ಕೆ ಮರೆತೇ ಹೋಗಿದೆ. ಇನ್ನು ಇಂದ್ರಿಯಗಳಾದರೊ, ಈ ಅಂತಃಕರಣವನ್ನು ಸೆಳೆದು ಸೆಳೆದು ಬಾಹ್ಯವಾಗಿರುವ ಶಬ್ದಾದಿವಿಷಯಗಳಲ್ಲಿಯೇ ತೊಡಗಿಸಿ ಆ ಮೂಲಕ ಬೇಕು-ಬೇಡಗಳನ್ನು ಕಲಿಯಿಸಿಕೊಟ್ಟು ಇದು ಯಾವಾಗಲೂ ಚಂಚಲವಾಗಿರುವಂತೆ ಮಾಡಿಟ್ಟಿವೆ. ಇಂಥ ವಿಕ್ಷಿಪ್ತ ಅಂತಃಕರಣವುಳ್ಳ ಪುರುಷನು ನಿಜವಾಗಿಯೂ ತನ್ನ ಸ್ವಸ್ವರೂಪದ ಅರಿವನ್ನು ಮನಗಾಣದೆ ಶೋಕಮೋಹಾದಿದ್ವಂದ್ವಗಳಿಗೆ ವಶನಾಗಿ ಸಂಸಾರದಲ್ಲಿಯೇ ಮುಳುಗಿಬಿಟ್ಟಿರುವನು. ಕಾಮಕ್ರೋಧಾದಿರೂಪವಾದ ಆಸುರೀಸಂಪತ್ತು ಬಹಿರ್ಮುಖವಾದ ಅಂತಃಕರಣವನ್ನು ಕಲುಷಿತಗೊಳಿಸಿ ಇವನ ಅವನತಿಗೇ ಕಾರಣವಾಗಿರುವದು. ಹೀಗಿರುವಲ್ಲಿ ಮಾನವತೆಯು ಹೇಗೆ ತಾನೆ ಪುರುಷನಲ್ಲಿ ಉಳಿದೀತು? ಮಾನವತೆಯಿಲ್ಲದ ಪುರುಷನ ಬಾಳು ಸುಖಮಯವಾಗಿ ಆಗುವದಾದರೂ ಹೇಗೆ ಸಾಧ್ಯ? ಮತ್ತು ದೇವರು ಕೊಟ್ಟಿದ್ದ ವಿಶೇಷಸವಲತ್ತಾದ ಅಂತಃಕರಣದ ದುರುಪಯೋಗವೂ ಪರಮಾವಧಿಯ ಮಟ್ಟದಲ್ಲಿ ಆಗಿದ್ದು ಮನುಷ್ಯಕುಲಕ್ಕೇ ಈಗ ವಿಪತ್ತು ಒದಗಿಬಂದಿದೆಯೆಂದರೆ ಅತಿಶಯೋಕ್ತಿಯಾಗಲಾರದು.

ಈಗ ಬಹಳ ಜಾಗ್ರತೆಯಾಗಿ ಮಾನವನು ಕೈಗೊಳ್ಳಬೇಕಾಗಿರುವ ಮುಖ್ಯ ಕೆಲಸವೆಂದರೆ ತನ್ನ ಅಂತಃಕರಣದ ಉದ್ಧಾರವೇ ಆಗಿದೆ. ಇದು ಎಲ್ಲರ ಉದ್ಧಾರದ ಗುರಿಯನ್ನೂ ಒಳಗೊಂಡೇ ಇರುತ್ತದೆ. ಈಗಿನ ನಮ್ಮ ಜೀವನಕ್ರಮ, ವಿದ್ಯಾಭ್ಯಾಸ, ಆಡಳಿತ- ಮುಂತಾದ ಯಾವದೇ ಕ್ಷೇತ್ರದಲ್ಲಿಯೂ ಅಂತಃಕರಣದ ಉದ್ಧಾರಕ್ಕೆ ಯಾವದೊಂದು ಯೋಜನೆಯೂ ಇಲ್ಲವಾಗಿರುವದು ತೀರ ವಿಷಾದಕರವಾದ ಸಂಗತಿಯಾಗಿದೆ. ಮನುಷ್ಯನ ಶರೀರಪೋಷಣೆ, ಇಂದ್ರಿಯಗಳಿಗೆ ಬೇಕಾದ ಸುಖ- ಇವುಗಳಿಗಾಗಿ ಎಲ್ಲಾ ವಿಧವಾದ ಪ್ರಯತ್ನಗಳೂ ಕಾರ್ಯಸಾಧನೆಯೂ ಈಗ ನಡೆಯುತ್ತಿವೆಯೇ ಹೊರತು ಅಂತಃಕರಣದ ಗತಿಯೇನಾಯಿತೆಂದು ನೋಡುವವರೇ ಇಲ್ಲವಾಗಿದೆ. ಇಂದಿನ ವಿದ್ಯಾಭ್ಯಾಸದ ಯೋಜನೆಯೂ ಸಹ ಹೊಟ್ಟೆಯಪಾಡಿಗೆ ಅನುಕೂಲವಾಗುವಂತೆ ರೂಪಿಸಲ್ಪಟ್ಟು ಇಂಥಿಂಥ ಪ್ಯಾಸುಮಾಡಿದವರಿಗೆ ಇಂಥಿಂಥ ಉದ್ಯೋಗವೆಂಬ ಪರಿಸ್ಥಿತಿಗೆ ಇಳಿದಿದ್ದು ಮನುಷ್ಯನ ಅಂತಃಕರಣದ ವೇದನೆಗಳ ಸುಧಾರಣೆ, ಅವುಗಳನ್ನು ಹಿಡಿತದಲ್ಲಿಟ್ಟುಕೊಳ್ಳುವದು, ಸ್ವಪರಕಲ್ಯಾಣಕ್ಕೆ ಅವುಗಳನ್ನು ವಿನಿ

ಯೋಗಿಸುವದು ಹೇಗೆ ಎಂಬ ವಿಷಯುಗಳಲ್ಲಿ ಏನೊಂದು ಶಿಕ್ಷಣವೂ ಈಗಿನ ಜನರಿಗೆ ದೊರೆಯುತ್ತಿಲ್ಲ. ಎಲ್ಲರ ಬಾಯಲ್ಲಿಯೂ ಸಮಾಜದ ಅಭಿವೃದ್ಧಿಯು ಮಾತುಗಳು ನಲಿದಾಡುತ್ತಿವೆಯಾದರೂ ಆ ಅಭಿವೃದ್ಧಿಯು ಮಾನವನ ಜೀವನದಲ್ಲಿ ಎಲ್ಲಿ, ಹೇಗೆ ಆಗಬೇಕೆಂಬುದನ್ನು ಮಾತ್ರ ಯಾರೂ ಯೋಚಿಸಿರುವದೇ ಇಲ್ಲ. ನಿಜವೇನೆಂದರೆ: ಮಾನವನು ತನ್ನ ಅಂತಃಕರಣದಲ್ಲಿ ದೈವೀಸಂಪತ್ತನ್ನು ಅಳವಡಿಸಿಕೊಂಡಲ್ಲದೆ ಕೇವಲ ಭೋಗಪ್ರಧಾನವಾದ ಆಸುರೀಸಂಪತ್ತಿನ ಜೀವನದಿಂದ ಇನ್ನು ಎಷ್ಟೇ ವರ್ಷಗಳನ್ನು ಕಳೆದರೂ ಅಭಿವೃದ್ಧಿಯನ್ನು ಸಾಧಿಸಲಾರನು. ಈಗಾಗಲೇ ಅನೇಕ ಪಾಶ್ಚಾತ್ಯರಾಷ್ಟ್ರಗಳವರು ಸುಖಶಾಂತಿಗಳಿಗೆಂತ ವಿಜ್ಞಾನದ ಮುನ್ನಡೆಯನ್ನು ಸಾಧಿಸಿಕೊಂಡಮೇಲೂ ಅಂತಃಕರಣದಮಟ್ಟದಲ್ಲಿ ತಕ್ಕ ಪ್ರಗತಿಯನ್ನು ಸಾಧಿಸದೆ ಇದ್ದುದರ ಫಲವಾಗಿ ಜೀವನದಲ್ಲೇ ನಿರಾಶರಾಗಿ ಭಯ – ಭ್ರಾಂತಿಗಳಿಗೆ ತುತ್ತಾಗಿ ಪೇಚಾಡುತ್ತಿರುವರು. ನಮ್ಮ ಭರತಖಂಡದವರೂ ಹೀಗೆಯೇ ಎಡವಿದರೆ ದುರ್ದೈವ ವೆಂದು ಹೇಳದೆ ವಿಧಿಯಿಲ್ಲ.

ನಿಜವಾಗಿ ನಮ್ಮ ಸಂಸ್ಕೃತಿಯು ಹಿನ್ನೆಲೆಯನ್ನು ಪರಿಶೀಲಿಸಿದರೆ ಪರರಾಷ್ಟ್ರ ಗಳಂತೆ ನಾವು ಎಂದಿಗೂ ಸುಖಶಾಂತಿಗಳಿಗಾಗಿ ಪೇಚಾಡುವ ಪ್ರಸಂಗವಿರುವದಿಲ್ಲ. ಏಕೆಂದರೆ ನಮ್ಮ ಹಿರಿಯರೂ ಪೂಜ್ಯರೂ ಆದ ಮಹರ್ಷಿಗಳು ತಮ್ಮ ಜೀವನವನ್ನೇ ಒತ್ತೆಯಾಗಿಟ್ಟು ಅಂತಃಕರಣದ ಸಂಸ್ಕೃತಿಯನ್ನು ಉನ್ನತಿಗೆ ಏರಿಸಿ ಶಾಂತಿಸುಖ ಗಳನ್ನು ಪಡೆದುಕೊಳ್ಳುವ ರಾಜಮಾರ್ಗವನ್ನು ನಮಗಾಗಿ ಕಂಡುಹಿಡಿದು ಬೋಧಿಸಿ ತಾವೂ ಅನುಷ್ಠಾನಮಾಡಿ ತೋರಿಸಿರುತ್ತಾರೆ. ಈ ಮಾರ್ಗಕ್ಕೆ ಅಧ್ಯಾತ್ಮಮಾರ್ಗ ವೆಂದು ಹೆಸರು. ಈ ರಾಜಮಾರ್ಗಕ್ಕೆ ಸೇರಿಕೊಳ್ಳುವಂಥ ಧರ್ಮ, ನೀತಿ, ಸದಾ ಚಾರಗಳೆಂಬ– ಕೆಲವು ಉಪಮಾರ್ಗಗಳನ್ನೂ ತೋರಿಸಿಕೊಟ್ಟು ಮಾನವಕುಲಕ್ಕೇ ಪರಮೋಪಕಾರವನ್ನು ಮಾಡಿರುತ್ತಾರೆ. ಅವರುಗಳು ಬೋಧಿಸಿರುವ ಅನೇಕ ವಿಷಯಗಳು ಆಯಾ ಕಾಲ, ದೇಶ, ಸಮಾಜಸ್ಥಿತಿಗತಿಗಳು ಹಾಗೂ ಜನರ ಯೋಗ್ಯ ತೆಗೆ ಅನುಗುಣವಾಗಿರಬೇಕಾದ ಸಂದರ್ಭಗಳಿಂದ ಭಿನ್ನ ಭಿನ್ನವಾದಂತೆ ಕಂಡರೂ ಕಡೆಯಲ್ಲಿ ಒಂದೇ ಗುರಿಯನ್ನು ಮುಟ್ಟುವದರಲ್ಲಿ ಯಶಸ್ವಿಯಾಗಿವೆ. ಹೇಗೆಂದರೆ : ಅಂತಃಕರಣವನ್ನು ಸುಸಂಸ್ಕೃತವಾಗಿ ಮಾಡಬೇಕಾದ ಸಂದರ್ಭದಲ್ಲಿ ಶರೀರವನ್ನೂ ಸೇರಿಸಿಕೊಂಡೇ ವ್ಯವಹರಿಸಬೇಕಾದದ್ದು ಅನಿವಾರ್ಯವಾಯಿತು. ಶರೀರ–ಎಂದ ಕೂಡಲೆ ಗಂಡಸು-ಹೆಂಗಸು–ಮುಂತಾದ, ಹಾಗೂ ಮನಸ್ಸು ಎಂದರೆ ಸಾತ್ತ್ವಿಕ– ರಾಜಸ–ತಾಮಸ– ಮುಂತಾದ ಭೇದಗಳೆಲ್ಲವೂ ಒಟ್ಟಿಗೆ ಕಾಣಿಸಿಕೊಂಡದ್ದರಿಂದ ಉಪದೇಶಕರು ಈ ಭೇದಗಳನ್ನೆಲ್ಲ ಲಕ್ಷ್ಯದಲ್ಲಿಟ್ಟು ಕೆಲವು ದೂರದವರೆಗೆ ಪ್ರತ್ಯೇಕ ಪ್ರತ್ಯೇಕವಾಗಿಯೇ ಪ್ರಾಥಮಿಕ ಬೋಧೆಗಳನ್ನು ನೀಡಿದರು. ಇವೇ ಕೆಲವು ವೇಳೆ ಮತಧರ್ಮಗಳಾಗಿ ಚಿಗುರಿಕೊಂಡು ದೊಡ್ಡದಾಗಿ ಬೆಳೆದವು. ಆದರೆ ಯಾವ ಮತ ಬೋಧೆಗಳೂ ಅಂತಃಕರಣದ ಸಂಸ್ಕಾರದ ವಿಷಯಕ್ಕೆ ಎಂದಿಗೂ ಭಿನ್ನಾಭಿಪ್ರಾಯ ಗಳನ್ನು ಹೊಂದಲೇ ಇಲ್ಲ. ಏಕೆಂದರೆ ಶರೀರಕ್ಕಿಂತ ಸೂಕ್ಷ್ಮವಾದ ಅಂತಃಕರಣವೂ

ಅದರಲ್ಲಿರುವ ರಾಗಾದಿದೋಷಗಳೂ ಎಲ್ಲರಿಗೂ ಸಮಾನವಾಗಿದ್ದವು. ಆದ್ದರಿಂದ ಮತಧರ್ಮ ಅಥವಾ ಸ್ವಧರ್ಮವೆನಿಸಿದ ಈ ಬೋಧೆಗಳು ಆಯಾ ಮಾನವರನ್ನು ದೇಹಾತ್ಮಬುದ್ಧಿಯಿಂದ ಪಾರುಮಾಡಿ ಅಂತಃಕರಣದ ದೈವೀಗುಣಗಳನ್ನು ಉನ್ನತ ಮಟ್ಟಕ್ಕೆ ಏರಿಸಲು ಸಹಾಯಕವಾದವು. ಹೀಗೆ ಮಾನವ ಮತ್ತು ಅವನ ಮನಸ್ಸು -ಎಂಬಿವೇ ಪ್ರಧಾನವಾಗಿ ಪರಿಗಣಿಸಲ್ಪಟ್ಟಾಗ ಜಗತ್ತಿನ ಮತಧರ್ಮಗಳೆಲ್ಲವೂ ಅವನ ಅಂತಃಕರಣದ ಉನ್ನತಿಗೆ ಸಹಾಯಮಾಡುವದರಲ್ಲಿಯೇ ತಾತ್ಪರ್ಯವುಳ್ಳವಾದವು-ಎಂದರೆ ತಪ್ಪಾಗಲಾರದು. ಆದ್ದರಿಂದ ಒಮ್ಮೆ ಮಾನವನು ಮತಧರ್ಮಗಳ ಸಹಾಯದಿಂದ ಸಾತ್ತ್ವಿಕಾಂತಃಕರಣಸಂಪನ್ನನೂ ದೈವೀಗುಣವಿಶಿಷ್ಟನೂ ಆದನೆಂದರೆ ಸಾಕು. ಅವನು ಮುಂದೆ ಮತಧರ್ಮಗಳನ್ನು ಅನುಸರಿಸದೆಹೋದರೂ ಅಪಾಯವಿಲ್ಲ. ಆದರೆ ಅಂತಃಕರಣಕ್ಕೆ ಏನೊಂದೂ ಸಂಸ್ಕಾರವಿಲ್ಲದ ಸ್ವಾಭಾವಿಕಸ್ಥಿತಿಯಲ್ಲಿಯೇ ಮಾನವನು ಮತಧರ್ಮಗಳ ವಿಷಯಕ್ಕೆ ಉದಾಸೀನನಾದರೆ ಅಥವಾ ದ್ವೇಷಬುದ್ಧಿಯವನಾದರೆ ಅಂಥವನು ಸಮಾಜಕ್ಕೆ ಶತ್ರುವಾಗಿ ಪರಿಣಮಿಸುವದೇ ನಿಜ. ಈ ಪರಿಸ್ಥಿತಿಯಲ್ಲಿ ಜನರನ್ನು ತಿದ್ದುವ ಸಲುವಾಗಿ ಮುಂದಾಳುಗಳಾಗಿ ಹೊರಟಿರುವ ವಿವೇಕಿಗಳು ಬಹು ಎಚ್ಚರಿಕೆಯಿಂದ ವರ್ತಿಸಿ ಮಾನವನನ್ನು ದೈವೀಸಂಪತ್ತಿನ ಕಡೆಗೇ ತಿರುಗಿಸಬೇಕಾಗಿದೆ. ಹಾಗಾಗದೆ ಹೋದರೆ ಮತಧರ್ಮಗಳೆಂಬ ಶಸ್ತ್ರದಿಂದ ನಮ್ಮ ತಲೆಯನ್ನು ನಾವೇ ಕತ್ತರಿಸಿಕೊಂಡವರಾಗಿಬಿಡುತ್ತೇವೆ. ಮತಧರ್ಮಗಳು ದುರುಪಯೋಗವಾಗದೆ ಇರಬೇಕಾದರೆ ಅವುಗಳ ಗುರಿಯನ್ನು ಅಂತಃಕರಣದ ಪರಿವರ್ತನೆಗೆ ಕೇಂದ್ರೀಕರಿಸುವದೊಂದೇ ಉಪಾಯವಾಗಿದೆ.

ಈಗ ಮತಧರ್ಮಾನುಷ್ಠಾನಗಳಿಂದ ಸಾತ್ತ್ವಿಕಾಂತಃಕರಣವನ್ನು ಸಂಪಾದಿಸಿಕೊಂಡವನ ಚಿಂತನೆಯನ್ನು ಅನುಸರಿಸೋಣ. ಅಂಥವನಿಗೆ ಕೆಲವು ಪ್ರಶ್ನೆಗಳು ಮನಸ್ಸಿನಲ್ಲಿ ಹುಟ್ಟಬಹುದಾಗಿದೆ. ಏನೆಂದರೆ ನನ್ನಂತೆಯೇ ಇನ್ನೂ ಅನೇಕಜೀವರುಗಳೂ ಅಚೇತನವಸ್ತುಗಳೂ ಈ ಪ್ರಪಂಚದಲ್ಲಿವೆಯಲ್ಲ ಇವುಗಳ ಸೃಷ್ಟಿಕರ್ತನಾರು? ಮೂಲವಾವುದು? ಏತಕ್ಕಾಗಿ ಇವರೆಲ್ಲರೂ ಜೀವಿಸಿರುವರು?- ಹೀಗೆಲ್ಲ ಆಲೋಚನೆಗಳು ಬಂದಾಗ ಅಂಥವನಿಗೆ ಮಾರ್ಗದರ್ಶನಮಾಡುತ್ತಾ ಉಪನಿಷತ್ತುಗಳು ತಿಳಿಸುವದೇನೆಂದರೆ: "ಈ ಭೂತಗಳೆಲ್ಲವೂ ಆನಂದದಿಂದ ಹುಟ್ಟಿವೆ, ಆನಂದದಲ್ಲಿಯೇ ಇವೆ; ಕಡೆಗೆ ಆನಂದವನ್ನೇ ಸೇರುತ್ತವೆ" ಎಂಬ ಸಂದೇಶವಾಗಿದೆ. ಈ ಬೋಧೆಯು ನಿಜವಾಗಿಯೂ ತತ್ತ್ವಚಿಂತಕನಿಗೆ ಒಪ್ಪಾಗುತ್ತದೆ ಏಕೆಂದರೆ ಪ್ರತಿಯೊಬ್ಬನೂ ಜೀವನದಲ್ಲಿ ಆನಂದಕ್ಕಾಗಿಯೇ ಪರದಾಡುತ್ತಿರುತ್ತಾನೆ. ಆದರೆ ಅದು ಎಲ್ಲಿದೆ? ಅದನ್ನು ಪಡೆಯುವದು ಹೇಗೆ? ಎಂಬಿದು ಮಾತ್ರ ತಿಳಿದಿರುವದಿಲ್ಲ. ಆದ್ದರಿಂದ ಈ ವಾಣಿಯು ಅವನಂತೆಯೇ ಅಂತಃಕರಣದ ಸಂಸ್ಕಾರವನ್ನು ಹೊಂದಿದವರಿಗೆಲ್ಲ ಇಷ್ಟವಾಗುತ್ತದೆ. ಅನಂತರ ಅವನು ಆ ಆನಂದದ ಅನ್ವೇಷಣೆಗೆ ಮನಸ್ಸುಮಾಡುತ್ತಾನೆ. ಈ ಉಪದೇಶವು ಯಾವ ಮತಧರ್ಮಕ್ಕೂ ವಿರೋಧಿಯಲ್ಲ; ಆದರೆ ಯಾವ ಮತಧರ್ಮಕ್ಕೂ ಸೇರಿದ್ದಲ್ಲ-ಎಂದಮೇಲೆ ಆನಂದದ ಅನ್ವೇಷಣೆಗೆ ಎಲ್ಲ ಮತದವರೂ

ಸಿದ್ಧರಾದಂತೆಯೇ ಆಯಿತಲ್ಲವೆ? ನಿಜವಾಗಿಯೂ ನೋಡಿದರೆ ಆನಂದಚಿಂತಕರಲ್ಲಿ ಭೇದಭಾವನೆಗಳಿರಲು ಸಾಧ್ಯವೆ? ಹೀಗೆ ಉಪನಿಷತ್ತುಗಳಲ್ಲಿ ಮತಧರ್ಮಗಳನ್ನೂ ಮೀರಿದ ಸಾರ್ವತ್ರಿಕವಾದ ಆಧ್ಯಾತ್ಮಬೋಧೆಗಳನ್ನು ತಿಳಿಸಿಕೊಡಲಾಗಿದೆ. ಯಾವನು ಈ ಉಪದೇಶಗಳನ್ನು ವಿಚಾರಮಾಡುತ್ತಾ ಮೇಲೇರುವನೋ ಅವನಿಗೆ ಎಲ್ಲಾ ದಾರಿಗಳೂ ಒಂದೇ ರಾಜಮಾರ್ಗಕ್ಕೆ ಬಂದು ಸೇರುತ್ತಿರುವದರ ಅರಿವಾಗುವದು. ಇದರಿಂದ ಅವನಿಗೆ ಉತ್ಸಾಹವುಂಟಾಗಿ ಮುಂದೆ ಗೊತ್ತಾದ ಹಾಗೂ ಕವಲಿಲ್ಲದ ಅಧ್ಯಾತ್ಮರಾಜಮಾರ್ಗದಲ್ಲಿ ಮೆಲ್ಲನೆ ನಡೆಯಲಾರಂಭಿಸುವನು. ಇವನೇ ನಿಜವಾದ ಅಧ್ಯಾತ್ಮಸಾಧಕನೆನಿಸುವನು.

ಈಗ ನಾವೆಲ್ಲರೂ ಬಹಿರಂಗವಾಗಿ ಯಾವದೇ ಭೇದಗಳನ್ನು ಹೊಂದಿದ್ದರೂ ಅಂತರಂಗದಲ್ಲಿ ಎಲ್ಲರೂ ಒಟ್ಟಾಗಿ ನಡೆಯಲಾರಂಭಿಸಬಹುದಾಗಿದೆ. ಆಗ ಉಪನಿಷತ್ತು ನಮಗೆ ತಿಳಿಸಿಕೊಡುವ ತತ್ತ್ವವು ಹೀಗಿದೆ :—

ಏಕೋ ವಶೀ ಸರ್ವಭೂತಾಂತರಾತ್ಮಾ
ಏಕಂ ರೂಪಂ ಬಹುಧಾ ಯಃ ಕರೋತಿ ।
ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾ
ಸ್ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಮ್ ॥

"ಎಲ್ಲರಿಗೂ ಸರ್ವಸಾಮಾನ್ಯವಾಗಿ ಇರತಕ್ಕ ಆತ್ಮನು ಒಬ್ಬನೇ. ಅವನು ಎಲ್ಲಾ ಪ್ರಾಣಿಗಳ ಹೃದಯದಲ್ಲಿಯೂ ಇರುವನು. ತಾನೊಬ್ಬನೇ ನಾನಾರೂಪಗಳನ್ನು ಮಾಡಿಕೊಂಡು ತೋರಿಕೊಳ್ಳುವನು. ಯಾವ ಧೀರರು ಇಂಥ ಏಕಮೇವಾದ್ವಿತೀಯನಾದ ಆತ್ಮನು ತಮ್ಮೊಳಗೇ ಇರುವನೆಂದು ಶಾಸ್ತ್ರಾಚಾರ್ಯೋಪದೇಶಗಳಿಗೆ ಅನುಸಾರವಾಗಿ ಕಂಡುಕೊಳ್ಳುವರೋ ಅಂಥವರಿಗೇ ಪರಮಶಾಂತಿಯು ದೊರಕಿರುವದು; ಬೇರೆಯವರಿಗಲ್ಲ" ಎಂಬಿದು ಈ ಉಪದೇಶದ ಅಭಿಪ್ರಾಯ. ಇದನ್ನು ನಾವೆಲ್ಲರೂ ಒಂದಲ್ಲ-ಒಂದು ದಿನ ಮನಗಾಣಲಿದ್ದೇವೆ. ಇದನ್ನು ಯಮದೇವನು ನಚಿಕೇತನಿಗೆ ಹೇಳಿರುತ್ತಾನೆ. ಮೃತ್ಯುವೆಂದರೆ ಎಂಥವನಿಗೂ ಭಯವುಂಟಾಗುವದು ಸಹಜ. ಆದರೆ ಆತನೇ ಬ್ರಹ್ಮವಿದ್ಯಾಚಾರ್ಯನೂ ಆಗಿರುತ್ತಾನೆ. ಆದ್ದರಿಂದ ಆ ಸದ್ಗುರುವಿನ ಅಭಿಪ್ರಾಯದಂತೆ ಆತ್ಮವಸ್ತುವು ಒಂದೇ. ಅದೇ ಬ್ರಹ್ಮವೆಂದೂ ಕರೆಯಲ್ಪಟ್ಟಿರುವದು. ಆನಂದವೆಂದರೂ ಅದೇ. ಇಂಥ ಅಜಾವ್ಯಯಾದ್ವಿತೀಯವಾದ ವಸ್ತುವು ತಾನೇ-ಎಂಬ ತಿಳಿವಳಿಕೆಯೇ ಬ್ರಹ್ಮವಿದ್ಯೆಯು. ಈ ಉಪದೇಶವು ಸಾತ್ತ್ವಿಕಸಾಧಕನ ಮನಸ್ಸಿಗೆ ಅರಿವಾದಾಗ ನಿಜವಾಗಿಯೂ ಅವನು ಮಾನವತ್ವವನ್ನು ದಾಟಿ ಅಮೃತನಾಗಿಬಿಡುವನು. ಇನ್ನು ಮಾನವತೆಗೆ ಇದಕ್ಕಿಂತ ಹೆಚ್ಚಿನ ಕೊಡುಗೆಯೇನಿದ್ದೀತು?

ಈ ಮಂತ್ರದಲ್ಲಿರುವ ಕೆಲವು ವಿಷಯಗಳನ್ನು ಈಗ ಇನ್ನೂ ಸ್ವಲ್ಪ ವಿವರವಾಗಿ ತಿಳಿಯೋಣ. ಇಲ್ಲಿ ಆತ್ಮನನ್ನು ವಶೀ ಎಂದು ಹೊಗಳಿದೆ. ಇದಕ್ಕೆ ಎಲ್ಲವನ್ನೂ

ತನ್ನ ಸ್ವಾಧೀನದಲ್ಲಿಟ್ಟುಕೊಂಡಿರುವವನು- ಎಂದರ್ಥ. ಎಲ್ಲಾ ಎಂಬ ಪದದಲ್ಲಿ ಅಖಿಲಾಂಡಕೋಟಿಬ್ರಹ್ಮಾಂಡಗಳೂ ಸೇರಿರುತ್ತವೆ. ಆದ್ದರಿಂದ ಆತ್ಮನು ಸರ್ವಶಕ್ತನೆಂದಾಗುತ್ತದೆ. ಸರ್ವಶಕ್ತನಾದ ದೇವನು ಒಬ್ಬನೇ ಎಂಬಿದು ಎಲ್ಲಾ ಮತದವರಿಗೂ ಒಪ್ಪಿಗೆದೆ. ಏಕೆಂದರೆ ಯಾವ ಮತದವರೂ ಇಬ್ಬರು ದೇವರನ್ನು ಅಂಗೀಕರಿಸಿರುವದಿಲ್ಲ. ಇನ್ನು ಈಗ ತಾನೊಬ್ಬನೇ ಎಲ್ಲವೂ ಆಗಿದ್ದಾನೆ-ಎಂದರೆ ಹೇಗೆಂಬುದನ್ನು ವಿಚಾರಮಾಡಬಹುದು. ಸಿಹಿಯೊಂದೇ ಎಲ್ಲಾ ಮಿಠಾಯಿ-ಬಿಸ್ಕತ್ತು ಮುಂತಾದ ತಿನಿಸುಗಳಾಗಿದೆ-ಎಂದರೆ ಹೇಗೋ ಹಾಗೆ ಆತ್ಮನೊಬ್ಬನೇ ಎಲ್ಲಾ ಪ್ರಪಂಚವೂ ಆಗಿರುತ್ತಾನೆ. ಆತ್ಮನು ಯಾರೊಬ್ಬರಿಗೂ ಗೊತ್ತಿಲ್ಲದವನಲ್ಲ. ಏಕೆಂದರೆ ಎಲ್ಲರೂ ತಮ್ಮ ತಮ್ಮನ್ನು 'ನಾನು'- ಎಂದೇ ಕರೆದುಕೊಳ್ಳುತ್ತಾರೆ. ಯಾರೊಬ್ಬರಿಗೂ ತಾವು 'ನಾನು ಹೌದೊ, ಅಲ್ಲವೊ? ಏಕೆಂದರೆ ಇನ್ನೊಬ್ಬನೂ 'ನಾನು' ಎಂದುಕೊಳ್ಳುತ್ತಾನಲ್ಲ' ಎಂಬ ಸಂಶಯವೇ ಇರುವದಿಲ್ಲ. ಹೀಗೆ 'ನಾನು' ಎಂದು ಎಲ್ಲರಲ್ಲಿಯೂ ಕಂಡುಬರುತ್ತಿರುವ ಆತ್ಮನು ಒಬ್ಬನೇ ಎಂದೇ ಸಿದ್ಧವಾಗುತ್ತದೆ. ಅವನೇ ಎಲ್ಲಾ ರೂಪಗಳಲ್ಲಿಯೂ ತೋರಿಕೊಂಡಿರುತ್ತಾನೆ. ಹೀಗೆ ವಿಚಾರಮಾಡುವಾಗ ನಾವು ಶಾಸ್ತ್ರ, ಹಾಗೂ ಗುರುವಿನ ಉಪದೇಶಗಳನ್ನು ಅನುಸರಿಸಿ ಮಾಡಿದರೆ ತತ್ತ್ವವು ಚೆನ್ನಾಗಿ ತಿಳಿದುಬರುತ್ತದೆ. ಏಕೆಂದರೆ ಶಾಸ್ತ್ರವು ಸಿದ್ಧವಸ್ತುವಾದ ಈ ಆತ್ಮನೇ ಪರಬ್ರಹ್ಮವೆಂದು ಯಾವ ಸಂಶಯಕ್ಕೂ ಅವಕಾಶವಿಲ್ಲದಂತೆ ಜ್ಞಾಪಕಮಾಡಿಕೊಡುತ್ತದೆ. ಗುರುಗಳು ಶಾಸ್ತ್ರಕ್ಕೆ ಅನುಸಾರವಾಗಿ ಈ ತತ್ತ್ವವನ್ನು ನಾವು ಹೇಗೆ ತಿಳಿದುಕೊಳ್ಳಬೇಕೋ ಹಾಗೆ ಮಾರ್ಗದರ್ಶನಮಾಡಿಸಿ ಅನುಭವದ ಕಡೆಗೆ ಸೆಳೆಯುತ್ತಾರೆ. ಆಗ ಅಧಿಕಾರಿಯಾದವನಿಗೆ ತನಗೇ ತನ್ನಲ್ಲಿಯೇ ಆತ್ಮದರ್ಶನವಾಗುತ್ತದೆ. ಅನಂತರ ಸರ್ವರಲ್ಲಿಯೂ ಅದೇ ಆತ್ಮನನ್ನೇ ಕಂಡುಕೊಂಡವನಾಗುತ್ತಾನೆ. ಇಂಥ ಸರ್ವಾತ್ಮದರ್ಶನವೇ ಜೀವನ್ಮುಕ್ತಿಯೆನಿಸುವದು. ಜೀವನ್ಮುಕ್ತನು ಯಾವಾಗಲೂ ತಾನು ಆನಂದಸ್ವರೂಪನಾಗಿದ್ದು ಇತರರನ್ನೂ ಆನಂದಕ್ಕೇ ಕರೆದೊಯ್ಯುವವನಾಗಿರುವನು. ಅವನೇ ನಿಜವಾಗಿ ಶಾಂತನು. ಆತ್ಮಸ್ವರೂಪದಲ್ಲಿ ನೆಲೆನಿಲ್ಲುವದರಿಂದ ಲಭಿಸುವ ಪರಮಶಾಂತಿಯು ಜಗತ್ತಿನಲ್ಲಿರುವ ಎಲ್ಲಾ ವಸ್ತುಗಳ ಲಾಭದಿಂದ ಕೂಡ ದೊರಕತಕ್ಕದ್ದಾಗಿರುವದಿಲ್ಲ.

ಇಂಥ ಆತ್ಮವಿದ್ಯೆಯನ್ನು ಉಪನಿಷತ್ತುಗಳಲ್ಲಿ ತಿಳಿಸಿರುವ ರೀತಿಯನ್ನು ಶ್ರೀ ಆದಿಶಂಕರಾಚಾರ್ಯರು ತಾವು ಕಂಡುಕೊಂಡು ಉಳಿದವರಿಗೂ ಬೋಧಿಸಿರುವ ಪ್ರಕಾರವನ್ನು ಅದ್ವೈತಸಿದ್ಧಾಂತವೆಂದು ಕರೆಯುತ್ತಾರೆ. ಆದರೆ ಇದು ಎಂದಿಗೂ ಒಂದು ಮತಧರ್ಮವಲ್ಲ. ಪೂರ್ವದಿಕ್ಕಿನಲ್ಲಿ ಸೂರ್ಯನು ಹುಟ್ಟುತ್ತಾನೆ- ಎಂದರೆ ಹೇಗೆ ಅದು ಒಂದು ವಸ್ತುಸ್ಥಿತಿಯೋ ಹಾಗೆ ನಮ್ಮೆಲ್ಲರ ಆತ್ಮನೂ ಒಬ್ಬನೇ, ಅವನು ಆನಂದಸ್ವರೂಪನು- ಎಂದು ಹೇಳುವದೂ ವಸ್ತುಸ್ಥಿತಿಯೇ ಆಗಿರುತ್ತದೆ. ಆದರೂ ಈಚೆಗೆ ಜನರಲ್ಲಿ ಅದ್ವೈತವೂ ಒಂದು ಮತ- ಎಂಬ ಭಾವನೆಯು ಬೆಳೆದಿರುತ್ತದೆ. ವಿಚಾರಮಾಡಿದರೆ ಇದು ಸರಿಯಲ್ಲವೆಂದು ಗೊತ್ತಾಗುವದು. ಅದ್ವೈತ

ತತ್ತ್ವವನ್ನು ಯಾರು ಯಾರು ಮನಗಾಣುವರೋ ಅವರೆಲ್ಲರೂ ಮೋಕ್ಷವನ್ನು ಪಡೆದೇತೀರುವರು. ಬದುಕಿರುವಾಗಲೂ ವ್ಯವಹಾರಸ್ಥಿತಿಯಲ್ಲಿ ಈ ತಿಳಿವಳಿಕೆಯಿಂದ ಲಾಭವುಂಟು. ಸಾವೆಲ್ಲರೂ ಜ್ಞಾನದೃಷ್ಟಿಯಿಂದ ಒಂದೇ ಎಂಬ ಭಾವನೆಯು ರಾಗದ್ವೇಷಗಳನ್ನು ಹೋಗಲಾಡಿಸುವದು. ಸಂಕುಚಿತಬುದ್ಧಿಯನ್ನು ಕಳೆದು ಎಲ್ಲರಲ್ಲಿಯೂ ಪ್ರೇಮವನ್ನುಂಟುಮಾಡುವದು. ಎಲ್ಲಕ್ಕಿಂತ ಹೆಚ್ಚಾಗಿ ದ್ವಿತೀಯವಸ್ತುವಿನ ನಿಮಿತ್ತವಾದ ಭಯವನ್ನು ಹೋಗಲಾಡಿಸುವದು. ತಾನೇ ಎಲ್ಲವೂ ಎಂದು ಭಾವಿಸಲ್ಪಟ್ಟಾಗ ಕಾಮಗಳೆಲ್ಲವೂ ನಮಗೆ ದಕ್ಕಿದಂತಾಗಿದ್ದು ಪೂರ್ಣವಾದ ತೃಪ್ತಿಯು ಮೂಡುವದು. ಎಲ್ಲಾ ದಿಕ್ಕುಗಳೂ ಇಂಥ ಜ್ಞಾನಿಗೆ ಸುಖಮಯವೇ ಆಗಿಬಿಡುವದು. ಈ ಎಲ್ಲಾ ಫಲಗಳೂ ನಮ್ಮ ಅಂತಃಕರಣದಲ್ಲಿಯೇ ಮೂಡುವದರಿಂದ ಅದು ವಿಶಾಲವಾಗಿ ಹಿಗ್ಗಿ ತನ್ನತನವನ್ನು ಹೋಗಲಾಡಿಸಿಕೊಂಡು ನದಿಯು ಸಮುದ್ರದಲ್ಲಿ ಒಂದಾದಂತೆ ಬ್ರಹ್ಮಾನಂದದ ಸಾಗರದಲ್ಲಿ ಲೀನವಾಗಿಬಿಡುವದು. ಆಗ್ಗೆ ಶತ್ರುಗಳಾಗಲೀ ಮಿತ್ರರಾಗಲೀ ಇರುವದಿಲ್ಲ. 'ವಾಸುದೇವನೇ ಎಲ್ಲವೂ' ಎಂಬ ಅನುಭವವು ನಮ್ಮದಾಗಿಬಿಡುವದರಿಂದ ಇದಕ್ಕಿಂತ ಹೆಚ್ಚಿನ ಲಾಭವಾವುದೂ ಇರುವದಿಲ್ಲ. ಎಲ್ಲ ಮತಧರ್ಮಗಳ ಸಾರವೂ ಈ ಅದ್ವೈತಾನಂದಸಾಗರದಲ್ಲೇ ಅಡಕವಾಗಿಬಿಡುವವು. ಇಂಥ ಆತ್ಮಲಾಭವು ಅದ್ವೈತತತ್ತ್ವದಲ್ಲಿ ನೆಲೆಗೊಳ್ಳುವದರಿಂದಲೇ ಮಾನವನಿಗೆ ದೊರಕುವದೆಂದು ಬಲ್ಲವರು ಹೇಳುವರು.

ಅದ್ವೈತಸ್ಥಿತಿಯನ್ನು ಅಂತಃಕರಣದಲ್ಲಿ ಅನುಭವಿಸುತ್ತಾ ಬಹಿಃಕರಣಗಳಿಂದ ಲೌಕಿಕವ್ಯವಹಾರವನ್ನೂ ಸಾಗಿಸುತ್ತಾ ಜನತೆಯನ್ನು ದುಃಖದಿಂದ ಆನಂದದೆಡೆಗೆ ಒಯ್ಯುವ ಜೀವನ್ಮುಕ್ತರು ಈಗ ಪ್ರಪಂಚಕ್ಕೆ ಅಗತ್ಯವಾಗಿರುತ್ತಾರೆ. ಮುಕ್ತರೆಂದರೆ ಜಡರೆಂದೊ, ಏಕಾಂತಜೀವಿಗಳೆಂದೊ, ಲೌಕಿಕದಿಂದ ನಿವೃತ್ತರಾದವರೆಂದೊ-ತಿಳಿಯಬಾರದು. ಮತ್ತೇನೆಂದರೆ : ತನ್ನ ಸುತ್ತಲೂ ಹರಡಿರುವ ಪ್ರಪಂಚವನ್ನೆಲ್ಲ ಬ್ರಹ್ಮಮಯವಾಗಿ ಕಾಣುತ್ತಾ ಲೋಕಸಂಗ್ರಹಕ್ಕಾಗಿ ಕರ್ಮಗಳನ್ನು ಮಾಡುತ್ತಾ ಸ್ವಾರ್ಥವಿಲ್ಲದೆ ಬದುಕನ್ನು ಸವೆಯಿಸುವ ಸಾಧು-ಸಂತರೇ ನಿಜವಾದ ಮುಕ್ತರು. ಇಂಥವರ ಒಡನಾಟವು ಕೂಡ ನಮ್ಮ ದುರ್ಗುಣಗಳನ್ನು ಕಳೆದು ಸದ್ಗುಣವಂತರನ್ನಾಗಿ ಮಾಡಬಲ್ಲದು. ಈಗಲೂ ಇಂಥ ಮಹಾತ್ಮರು ಇದ್ದೇಇರುತ್ತಾರೆ. ನಾವು ಅಂತರಂಗಶುದ್ಧಿಯಿಂದ ನೋಡಿ ಗುರುತಿಸಿ ಇಂಥವರನ್ನೇ ಸೇವಿಸಿ ಕೃತಾರ್ಥರಾಗಬೇಕು. ಆಗಲೆ ನಾವು ನಿಜವಾದ ಮಾನವರಾಗುವೆವು.

ಓಂ ಶಾಂತಿಃ ಶಾಂತಿಃ ಶಾಂತಿಃ

[ತಾ॥ 31-1-1982ನೆಯ ಭಾನುವಾರ ಅರಸೀಕೆರೆಯಲ್ಲಿ ನಡೆದ ಬಸವಾಪಟ್ಟಣದ ಶ್ರೀರಾಘವೇಂದ್ರ ಗುರೂಜಿಯವರು ಏರ್ಪಡಿಸಿದ್ದ ಸರ್ವಧರ್ಮಸಮ್ಮೇಳನದಲ್ಲಿ "ಅಧ್ಯಾತ್ಮ ಪ್ರಕಾಶ" ಪತ್ರಿಕೆಯ ಸಂಪಾದಕರು ಮಂಡಿಸಿದ ಪ್ರಬಂಧವಿದು ]

# ಜೀವರುಗಳ ಪರಸ್ಪರಾವಲಂಬನೆ

(ಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು)

ಮನುಷ್ಯರು, ಪ್ರಾಣಿಗಳು, ಸಸ್ಯಗಳು-ಇವುಗಳಲ್ಲಿ ತಾರತಮ್ಯವು ಕಾಣುತ್ತಲೇ ಇರುತ್ತದೆ. ಒಬ್ಬ ಮನುಷ್ಯನಂತೆ ಇನ್ನೊಬ್ಬನಿಗೆ ಶರೀರ, ಇಂದ್ರಿಯಪಟುತ್ವ, ಮನಸ್ಸಿನ ಮಟ್ಟ, ಬುದ್ಧಿಕೌಶಲ-ಇವು ಯಾವವೂ ಇರುವದಿಲ್ಲ. ಇದರಂತೆಯೇ ಪ್ರಾಣಿಗಳಿಗೂ ಸಸ್ಯಗಳಿಗೂ ತಿಳಿಯಬೇಕು. ಅವು ಯಾವವೂ ಒಂದಿದ್ದಂತೆ ಮತ್ತೊಂದು ಇರುವದಿಲ್ಲ. ಸೃಷ್ಟಿವೈಚಿತ್ರ್ಯವೇ ಹೀಗಿರುತ್ತದೆ.

ಆದರೂ ಒಬ್ಬ ಮನುಷ್ಯನು ಇನ್ನೊಬ್ಬನನ್ನು-ಒಂದು ಪ್ರಾಣಿಯು ಇನ್ನೊಂದು ಪ್ರಾಣಿಯನ್ನು- ಒಂದು ಸಸ್ಯವು ಇನ್ನೊಂದು ಸಸ್ಯವನ್ನು ಅವಲಂಬಿಸಿಕೊಂಡು ಬೆಳೆಯಬೇಕಾದ ಅವಶ್ಯಕತೆಯಿರಬಹುದು. ಮಕ್ಕಳು ತಂದೆತಾಯಿಗಳನ್ನು, ಸ್ನೇಹಿತರುಗಳು ಒಬ್ಬರೊಬ್ಬರನ್ನು, ಕರುಗಳು ಹಸುಗಳನ್ನು, ಬಳ್ಳಿಗಳು ಬೇರೆಯ ಗಿಡಗಳನ್ನು- ಹೀಗೆ ಆಶ್ರಯಿಸಿಕೊಂಡು ಇರಬೇಕಾದದ್ದುಂಟು. ಇಂಥ ಸಂದರ್ಭಗಳಲ್ಲಿ ಯಾರು ಅವಲಂಬನೆಯನ್ನು ಕೊಡಬೇಕಾಗಿರುವದೋ ಅವರಿಗೆ 'ನಾನು ಇವರಿಗೆ ಅವಲಂಬನೆಯನ್ನು ಕೊಡುವವನು'-ಎಂಬ ಅಭಿಮಾನವು ಬರುವದಕ್ಕೆ ಅವಕಾಶವಿದೆ. ಅದರಲ್ಲಿಯೂ ಮನುಷ್ಯನಿಗೆ ಈ ಹೆಮ್ಮೆಯು ಹೆಚ್ಚಾಗಿ ಬರಬಹುದಾಗಿದೆ.

ಒಬ್ಬರಿಗೊಬ್ಬರು ಅವಲಂಬನೆಯಾಗಿ ಬಾಳಲಿ! ಎಂಬಿದು ಈಶ್ವರನ ಸಂಕಲ್ಪ. ಆದರೆ ಯಾರೊಬ್ಬರಿಗೂ ಮತ್ತೊಬ್ಬರನ್ನು ಒತ್ತಾಯಪಡಿಸುವ ಹಕ್ಕು ಇರುವದಿಲ್ಲ. ಏಕೆಂದರೆ ಎಲ್ಲರಿಗೂ ಮೂಲವು ಭಗವಂತನೇ. ಭಗವಂತನಿಂದಲೇ ನಮ್ಮ ಸಿರಿಸಂಪತ್ತೆಲ್ಲವೂ ಬಂದಿರುವದು. ಶರೀರ, ಇಂದ್ರಿಯಗಳು, ಬಲ, ಬುದ್ಧಿ-ಮುಂತಾದ ಕೊಡುಗೆಗಳೆಲ್ಲವೂ ಈಶ್ವರನ ವರಪ್ರಸಾದವೇ ಆಗಿರುವವು. ಭಗವಂತನೇ ಎಲ್ಲರಿಗೂ ನಿಜವಾದ ಅವಲಂಬನೆಯಾಗಿರುವನು. 'ನಾನು ಇಂಥವನಿಗೆ ಆಶ್ರಯವನ್ನು ನೀಡಿರುತ್ತೇನೆ; ಆದ್ದರಿಂದ ನಾನು ಹೇಳಿದಂತೆ ಅವನು ಕೇಳಬೇಕು'-ಎಂಬ ಮಿಥ್ಯಾಭಿಮಾನವನ್ನು ಬಿಟ್ಟುಬಿಡಿರಿ. ಪರಮೇಶ್ವರನೊಬ್ಬನನ್ನು ಬಿಟ್ಟರೆ ಮತ್ತೊಬ್ಬರ ಅವಲಂಬನೆಯನ್ನು ಕೋರದ ಜೀವನೇ ಇಲ್ಲ. ಆದ್ದರಿಂದ ಯಾರಿಗಾದರೂ ನೀವು ಅವಲಂಬನೆಯಾಗುವ ಅವಕಾಶವು ಸಿಕ್ಕಿದರೆ ಅದು ಪರಮೇಶ್ವರನ 'ವರಪ್ರದಾನ'ವೆಂದೇ ಭಾವಿಸಿರಿ. ಆ ಭಗವಂತನಿಗೆ ಮೆಚ್ಚಾಗುವಂತೆ ನಿಮ್ಮ ಕರ್ತವ್ಯವನ್ನು ಪಾಲಿಸಿರಿ. "ಯಾವರೀತಿಯಿಂದಲಾದರೂ ಯಾವದಾದರೊಂದು ಪ್ರಾಣಿಗೆ ನಾನು ಸೇವೆಯನ್ನು ಸಲ್ಲಿಸಿ ಸಂತೋಷಗೊಳಿಸಿದ್ದೇ ಆದರೆ ಅದೇ ದೊಡ್ಡ ದೇವರ ಪೂಜೆಯಾಯಿತು"-ಎಂದು ಚಿಂತಿಸುತ್ತಿರಿ. ಸಮಯವು ಬಂದಾಗ ಜಾರಿಕೊಳ್ಳದೆ ಸೂಕ್ತ ನೆರವನ್ನು ಅವಶ್ಯವಿರುವವರಿಗೆ ನೀಡಿ ಭಗವಂತನು ನಿಮಗೆ ದಯಪಾಲಿಸಿರುವ ಕಾರ್ಯಕರಣ ಸಂಘಾತವನ್ನು ಸಾರ್ಥಕಗೊಳಿಸಿಕೊಳ್ಳಿರಿ.

# ಶಾಖಾಕಾರ್ಯಾಲಯದ ಸುದ್ದಿ

ಭಾಷ್ಯಪಾಠಗಳು : ಗೀತಾಭಾಷ್ಯದಲ್ಲಿ ೫ನೆಯ ಅಧ್ಯಾಯವು ಪೂರೈಸಿ ೬ನೆಯ ಅಧ್ಯಾಯವು ಪ್ರಾರಂಭವಾಗಿದೆ. ಕೇನೋಪನಿಷತ್ತಿನಲ್ಲಿ ವಾಕ್ಯಭಾಷ್ಯವು ೨೧ ನಡೆಯುತ್ತಿದೆ. ಎಂದಿನಂತೆ ಉತ್ಸಾಹದಿಂದ ಜಿಜ್ಞಾಸುಗಳು ಬಂದು ಇದರ ಪ್ರಯೋಜನವನ್ನು ಹೊಂದುತ್ತಿದ್ದಾರೆ.

ಪುರಾಣ, ಉಪನ್ಯಾಸಗಳು : ಕಾರ್ತಿಕಮಾಸದ ಪ್ರಯುಕ್ತ ಒಂದು ತಿಂಗಳಕಾಲ ಕಾರ್ತಿಕಮಾಸಮಾಹಾತ್ಮ್ಯವನ್ನು ಹೇಳಲಾಯಿತು. ಈಗ ಪುನಃ ಮಹಾಭಾರತವನ್ನೇ ಮುಂದುವರಿಸಲಾಗುತ್ತಿದೆ. ಶಲ್ಯಪರ್ವದಲ್ಲಿ ೪೦ನೆಯ ಅಧ್ಯಾಯವು ನಡೆಯುತ್ತಿದೆ. ಪ್ರತಿ ಏಕಾದಶೀ ದ್ವಾದಶೀದಿನಗಳಲ್ಲಿ ಅಧ್ಯಾತ್ಮರಾಮಾಯಣ ಪ್ರವಚನಗಳು ನಡೆಯುತ್ತಿವೆ. ಪ್ರತಿ ಭಾನುವಾರಗಳಲ್ಲಿಯೂ 'ವಿವೇಕಚೂಡಾಮಣಿ' ಉಪನ್ಯಾಸಗಳು ಮುಂದುವರೆಯುತ್ತಿವೆ.

ವಿಶ್ವೇಶ್ವರಪುರದ ಅಧ್ಯಾತ್ಮಮಂದಿರದಲ್ಲಿ ಪ್ರತಿದಿನವೂ ಬೆಳಗ್ಗೆ ಮತ್ತು ಸಾಯಂಕಾಲ ಸಮಯದಲ್ಲಿ 'ಉಪದೇಶಸಾಹಸ್ರೀ, ವಿವೇಕಚೂಡಾಮಣಿ' ಉಪನ್ಯಾಸಗಳು ನಡೆಯುತ್ತಿವೆ.

ವಿಶೇಷ ಅನುಷ್ಠಾನಗಳು : (೧) ಶ್ರೀಮದ್ಭಗವದ್ಗೀತಾಜಯಂತೀ ಸಪ್ತಾಹಮಹೋತ್ಸವ ಪ್ರಯುಕ್ತ ತಾ॥ 7-12-81ರಿಂದ ಒಂದು ವಾರಕಾಲ ಗೀತಾಶಾಂಕರಭಾಷ್ಯಪ್ರವಚನ, ಗೀತೋಪನ್ಯಾಸಗಳು ನಡೆದವು. ಪ್ರೊ॥ ಎಸ್. ಕೆ. ರಾಮಚಂದ್ರರಾಯರು, ವಿದ್ವಾನ್ ಹೆಚ್ ಎಸ್. ವರದದೇಶಿಕಾಚಾರ್ಯ(ರಂಗಪ್ರಿಯ)ರು, ಬ್ರಹ್ಮಜ್ಞಕವಿ ಶ್ರೀ ದೇವರಾಯಕುಲಕರ್ಣಿಗಳು, ಕೆ. ಜಿ. ಸುಬ್ರಾಯ ಶರ್ಮರು- ಇವರುಗಳಿಂದ ಪ್ರವಚನೋಪನ್ಯಾಸಗಳು ನಡೆದವು. (೨) ಶ್ರೀಶ್ರೀಗಳವರ ೧೦೩ನೆಯ ವರ್ಷದ ಜಯಂತೀ ಉತ್ಸವದ ಅಂಗವಾಗಿ 18-12-81ರಂದು ಭಕ್ತಾದಿಗಳಿಂದ ಪಾದಪೂಜೆ, ಶ್ರೀಶ್ರೀಗಳವರ 'ಗೀತಾಶಾಸ್ತ್ರಾರ್ಥವಿಚಾರ' ಗ್ರಂಥದ ಬಗ್ಗೆ ವಿಶೇಷ ಉಪನ್ಯಾಸ, ಶ್ರೀಶ್ರೀ ಗುಣಗಾನ, ವಿಶೇಷಪಾರಾಯಣ ಭಜನೆಗಳನ್ನು ನಡೆಸಲಾಯಿತು. (೩) ಗೋಂದಾವಳೀ ಶ್ರೀ ಬ್ರಹ್ಮಚೈತನ್ಯ ಸದ್ಗುರು ಮಹಾರಾಜರ ಆರಾಧನಾಪ್ರಯುಕ್ತ ತಾ॥ 19-12-81 ಮತ್ತು 20-12-81ರಂದು ಬೆಳಗ್ಗೆ ಮತ್ತು ಮಧ್ಯಾಹ್ನ ಶ್ರೀವಿಷ್ಣುಸಹಸ್ರನಾಮಸ್ತೋತ್ರ ಸಾಮೂಹಿಕ ಪಾರಾಯಣವು ನಡೆದು 'ಶ್ರೀಮದ್ಭಾಗವತಪುರಾಣ' ಪ್ರವಚನಗಳೂ 'ರಾಮನಾಮಜಪಾನುಷ್ಠಾನ' ಉಪನ್ಯಾಸಗಳೂ ವೇ॥ ಶರ್ಮರಿಂದಲೇ ನಡೆದವು.

ವಿಶೇಷ ಉಪನ್ಯಾಸಗಳು : ಗೀತಾಜಯಂತೀ ಅನುಷ್ಠಾನದ ಪ್ರಯುಕ್ತ ವೇ॥ ಕೆ. ಜಿ. ಸುಬ್ರಾಯಶರ್ಮರಿಂದ ಈ ಕೆಳಗೆ ತಿಳಿಸಿರುವ ಸ್ಥಳಗಳಲ್ಲಿ ಗೀತೋಪನ್ಯಾಸಗಳು ನಡೆದವು. (೧) ವಿಶ್ವೇಶ್ವರಪುರದ ಅಧ್ಯಾತ್ಮಮಂದಿರದಲ್ಲಿ ಒಂದು ವಾರ ಗೀತಾಸಪ್ತಾಹ. (೨) ಶ್ರೀರಾಂಪುರದ ಗೀತಾಮಂದಿರ. (೩) ಗಾಂಧೀನಗರದ ಶ್ರೀ ಬ್ರಹ್ಮವಿದ್ಯಾಶ್ರಮ. ೪) ಮಲ್ಲೇಶ್ವರದ ಶ್ರೀ ಶೃಂಗೇರೀಶಂಕರಮಠ. (೫) ಗಾಂಧೀನಗರದ ಅನಂತಸ್ವಾಮಿ ಆಶ್ರಮ.

---

# ಉಪಕಾರಸ್ಮರಣೆ

ಪತ್ರಿಕೆಗೆ ನೂತನ ಮಹಾಪೋಷಕರುಗಳು : ಶ್ರೀಯುತರುಗಳಾದ : ನಂ. M. P. 595. ಅರವಿಂದ ರಂಗನಾಥ ಪಾಟೀಲರು, ಬೆಂಗಳೂರು. 596. ಎಂ. ಜಿ. ರಾಘವೇಂದ್ರರಾಯರು, ಬೆಂಗಳೂರು. 597. ಕೆ. ಸೀತಾರಾಮಯ್ಯನವರು ನಂಜನಗೂಡು. 598. ಎಸ್. ಎನ್. ರಂಗನಾಥರವರು, ಬೆಂಗಳೂರು. 599. ಹೆಚ್. ವಿ. ವೆಂಕಟರಾಮು ರವರು, ಹೊಸಹೊಳಲು. 600. ಡಾ|| ವಿ. ಎ. ಶಂಕರನಾರಾಯಣಗುಪ್ತರು, ಬೆಂಗಳೂರು. 601. ಭಾಸ್ಕರ ರಂಗಯ್ಯಶೆಟ್ಟರು, ಬೆಂಗಳೂರು. 60 . ಜಿ.ಎಸ್. ವಿಶ್ವೇಶ್ವರ–ರವರು, ಬೆಂಗಳೂರು. (ತಿದ್ದುಪಡಿ : 1982ನೇ ಜನವರಿ ಮಾಹೆಯ ಸಂಚಿಕೆ ರ್‍ಯಾಪರ್‌ನಲ್ಲಿ ಪ್ರಕಟವಾಗಿರುವ M.P. 589ನೆಯ ಹೆಸರನ್ನು ಪಿ. ನಾಗರಾಜ್– ಎಂದು ಓದಿಕೊಳ್ಳಬೇಕಾಗಿ ಪ್ರಾರ್ಥನೆ.)

೫೧ನೆಯ ಸಂಪುಟಕ್ಕೆ ಪೋಷಕರು : ಚಂದ ನಂ. 482. ಹೆಚ್. ಎಸ್. ಗುಂಡಪ್ಪನವರು, ಬೊಂಬಾಯಿ–ರವರು ರೂ. ೧೫ನ್ನು ಕೊಟ್ಟು ಪ್ರೋತ್ಸಾಹಿಸಿದ್ದಾರೆ.

1981 ನೆಯ ಡಿಸೆಂಬರ್ ಮಾಹೆಯಲ್ಲಿ ಈ ಕೆಳಗೆ ಕಂಡಂತೆ ಸಹಾಯದ್ರವ್ಯವನ್ನು ಕೃತಜ್ಞತೆಯಿಂದ ಸ್ವೀಕರಿಸಲಾಗಿದೆ :—

ಗ್ರಂಥಪ್ರಕಟನೆಗೆ:– ಶ್ರೀಮತಿ ಕೆ. ವಿ. ಮಂಗಳಾಂಬರವರು, ಚಿತ್ರದುರ್ಗ; ರೂ. ೧೦೦. ಡಿ ಆರ್. ವೆಂಕಟರಮಣನ್‌ರವರು, ಬೆಂಗಳೂರು, ರೂ. ೧೦. ಶ್ರೀ ರಾಮಚೈತನ್ಯರು, ಬೆಂಗಳೂರು, ರೂ. ೧೦. ಒಟ್ಟು ರೂ. ೧೨೦.

ಪೂಜಾಮಂದಿರಕ್ಕೆ : ಯಾದಾಳಂ ವಂಶೀಕರು, ಬೆಂಗಳೂರು; ರೂ. ೧೫.

ಗುರುಮಂದಿರಕ್ಕೆ : ಯಾದಾಳಂ ವಂಶೀಕರು, ಬೆಂಗಳೂರು; ರೂ. ೧೦.

ಅನುಷ್ಠಾನ ನಿಧಿಗೆ: (ಗೀತಾಜಯಂತೀ + ಬ್ರಹ್ಮಚೈತನ್ಯಾರಾಧನೆಗಳಿಗೆ) ಶ್ರೀಗಳಾದ : ಕೃಷ್ಣಮೂರ್ತಿಗಳು, ಅಡಗೂರು ರೂ. ೨; ವೇ|| ಗಂಗಾಧರಭಟ್ಟರು, ಹೊಳೆನರಸೀಪುರ ರೂ. ೨ ; ಎ. ಎಸ್. ವೆಂಕಟರಮಣಶೆಟ್ಟರು, ಹೊಳೆನರಸೀಪುರ ರೂ. ೨; ಶ್ಯಾ|| ಕೃಷ್ಣಪ್ಪನವರು, ಅಣತಿ ರೂ. ೫; ವೈ. ಆರ್. ಎಲ್. ನಾರಾಯಣ್ ರವರು. ಬಿಕ್ಕೋಡು ರೂ. ೫; ಡಿ. ಹೆಚ್. ಪುಂಡಲೀಕರಾಯರು, ಬೆಂಗಳೂರು ರೂ. ೧೦; ಯು. ಜಿ. ಕೃಷ್ಣಮೂರ್ತಿಗಳು, ಉಚ್ಚಂಗಿ ರೂ. ೫; ಶ್ರೀಮತಿಯರಾದ : ಎ. ಎಸ್. ಭಾಗೀರಥಮ್ಮನವರು, ಹೊಳೆನರಸೀಪುರ ರೂ ೧೦; ಎನ್. ಭಾಗೀರಥಮ್ಮನವರು (ಶ್ರೀ ಸೋಮಣ್ಣನವರ ತಾಯಿಯವರು) ರೂ ೭; ಒಟ್ಟು ರೂ. ೪೮.

ಮೇಲ್ಕಂಡ ಮಹಾಶಯರುಗಳೆಲ್ಲರಿಗೂ ನಮ್ಮ ಕೃತಜ್ಞತಾಪೂರ್ವಕವಾದ ಅಭಿನಂದನೆಗಳನ್ನು ಈ ಮೂಲಕ ಸಮರ್ಪಿಸುವೆವು.

---

ಶಾಖಾಕಾರ್ಯಾಲಯದ ವಿಳಾಸ :

ಅಧ್ಯಾತ್ಮ ಪ್ರಕಾಶ ಕಾರ್ಯಾಲಯ, ಬೆಂಗಳೂರು ಶಾಖೆ,
ನಂ. 68, ಸುಬ್ಬರಾಮಶೆಟ್ಟಿ ಲೇ-ಔಟ್,
ತ್ಯಾಗರಾಜ ನಗರ–ಬೆಂಗಳೂರು–28.

# ಗೀತಾಜಯಂತ್ಯುತ್ಸವಗಳು

(೧) ಗೀತಾಸಪ್ತಾಹ : ಕೋಲಾರ ಚಿನ್ನದಗಣಿ ರಾಬರ್ಟ್‌ಸನ್ ಪೇಟೆ ಗಣೇಶಪುರಂ ಬಡಾವಣೆಯಲ್ಲಿ ತಾ|| 7-1-82 ರಿಂದ ಒಂದು ವಾರ ಕಾಲ ಗೀತಾ ಸಪ್ತಾಹವು ನೆರವೇರಿತು. ಮುಖ್ಯ ಪ್ರವಚನಕಾರರಾಗಿ ಬೆಂಗಳೂರಿನ ಶ್ರೀ ದೇವ ರಾಯಕುಲಕರ್ಣಿಯವರು ದಯಮಾಡಿಸಿದ್ದರು. ಶ್ರೀ ಜಿ. ಹೆಚ್. ಹಿರಿಯಣ್ಣನವರು ಗೀತಾಪಾರಾಯಣವನ್ನು ನಡೆಯಿಸಿಕೊಟ್ಟರು. ಸಮಾರೋಪಭಾಷಣವನ್ನು ಜಿಲ್ಲಾ ವೈದ್ಯಾಧಿಕಾರಿಗಳಾದ ಡಾ|| ಹೆಚ್. ಬಿ. ದೊರೆಸ್ವಾಮಿಯವರು ಮಾಡಿದರು. ಕೆ ಜಿ. ಎಫ್. ಪ್ರಥಮದರ್ಜೆ ಕಾಲೇಜಿನ ಪ್ರಾಂಶುಪಾಲರಾದ ಪ್ರಾಧ್ಯಾಪಕ ಶ್ರೀ ಜಿ.ಹೆಚ್. ಪಾರ್ಥಸಾರಥಿಯವರು ಅಧ್ಯಕ್ಷತೆ ವಹಿಸಿ ಸಮಾರಂಭವನ್ನು ಯಶಸ್ವಿಯಾಗಿ ನೆರವೇರಿಸಿಕೊಟ್ಟರು. ಅಧ್ಯಾತ್ಮಯೋಗಸಾಧನ ಸಂಘದ ಅಧ್ಯಕ್ಷರಾದ ಶ್ರೀ|| ಓ. ವಿ. ರಾಮಯ್ಯನವರು ಪ್ರವಚನಕಾರರ ಪರಿಚಯವನ್ನು ಮಾಡಿಕೊಟ್ಟರು. ಶ್ರೀ ಎ. ಬಿ. ಬಸವರಾಜುರವರು ವಂದನಾರ್ಪಣೆಯನ್ನು ಮಾಡಿದರು.

(೨) ಗೀತಾಜ್ಞಾನಯಜ್ಞ : ಕೋಲಾರ ಚಿನ್ನದಗಣಿ ಬಿ. ಇ. ಎಂ. ಎಲ್. ನಗರದಲ್ಲಿರುವ "ಶ್ರೀ ವಿಶ್ವಕರ್ಮವಿದ್ಯಾವರ್ಧಕ ಸಂಘ"ದ ಆಶ್ರಯದಲ್ಲಿ || 8-1-82 ರಿಂದ ಒಂದು ವಾರ ಕಾಲ ಗೀತಾಯಜ್ಞವು ನಡೆಯಿತು. ಈ ಸಂದರ್ಭಕ್ಕೂ ಬ್ರಹ್ಮಜ್ಞಕವಿ ಶ್ರೀ ದೇವರಾಯಕುಲಕರ್ಣಿಯವರೇ ಪ್ರಧಾನ ಪ್ರವಚನಕಾರರಾಗಿ ದಯಮಾಡಿಸಿದ್ದರು. ಸುಮಾರು 40 ಜನ ಶಾಲಾ ಬಾಲಕಿಯರು ಸಾಮೂಹಿಕವಾಗಿ ಗೀತಾ ೧೫ ನೆಯ ಅಧ್ಯಾಯವನ್ನು ಪಠನಮಾಡುತ್ತಿದ್ದರು. ಪ್ರಾರಂಭದ ದಿನ ರಾಬರ್ಟ್‌ಸನ್ ಪೇಟೆ ಕನ್ನಡ ಸಂಘದ ಅಧ್ಯಕ್ಷರಾದ ಶ್ರೀ ಜ್ಞಾನಾನಂದ ಅವರು ಸ್ವಾಗತಭಾಷಣ ಮಾಡಿದರು. ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ಸ್ಥಳೀಯ ಶಾಖೆಯ ಮ್ಯಾನೇಜರರಾದ ಶ್ರೀ ಅಚ್ಯುತಾನಂತಸ್ವಾಮಿಗಳು ಗೀತೆಯ ಹೆಚ್ಚುಗಾರಿಕೆಯನ್ನು ಕುರಿತು ಭಾಷಣ ಮಾಡಿದರು. ಶ್ರೀ ಓ.ವಿ. ರಾಮಯ್ಯನವರು ಪರಿಚಯಭಾಷಣವನ್ನೂ ಶ್ರೀ ಪ್ರಭಾಕರ ಬಿ. ಸೋನಾರ್ ರವರು ವಂದನಾರ್ಪಣೆಯನ್ನೂ ನಡೆಯಿಸಿಕೊಟ್ಟರು. ಶ್ರೀಮತಿ ಸರಿತಾ ಜ್ಞಾನಾನಂದರವರ ಮೇಲ್ವಿಚಾರಣೆಯಲ್ಲಿ 48 ಮಂದಿ ಬಾಲಕಬಾಲಕಿಯರು ಗೀತಾ ಕಂಠಪಾಠ ಸ್ಪರ್ಧೆಯಲ್ಲಿ ಭಾಗವಹಿಸಿದ್ದರು. ೧೫ ನೆಯ ಅಧ್ಯಾಯವನ್ನು ಇವರಿಗೆ ಶ್ರೀಮತಿ ಅಂಬುಜಮ್ಮನವರು ಕಂಠಪಾಠ ಮಾಡಿಸಿದ್ದರು. ಬ್ಯಾಂಕ್ ಮ್ಯಾನೇಜರ್ ಶ್ರೀ ಚಕ್ರವರ್ತಿಯವರು, ಪಂಡಿತ್ ವೀರರಾಘವಶರ್ಮರೂ ಶ್ರೀ ಓ. ವಿ. ರಾಮಯ್ಯನವರೂ ತೀರ್ಪುಗಾರರಾಗಿದ್ದರು. ಅಧ್ಯಾತ್ಮಪ್ರಕಾಶಕಾರ್ಯಾಲಯದ ಪರವಾಗಿ ವಿಜೇತರಿಗೆ ಪ್ರಶಸ್ತಿಪತ್ರಗಳನ್ನೂ ಬಹುಮಾನಗಳನ್ನೂ ಕೊಡಲಾಯಿತು. ಬ್ರಹ್ಮೀಭೂತ ಶ್ರೀ ಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳ ಜೀವನಚರಿತ್ರೆಯನ್ನು ಕುರಿತ ಚಿಕ್ಕ ಪ್ರಕಟಣೆಯ ಮೇಲೆ ಪ್ರಶ್ನಪತ್ರಿಕೆಯನ್ನೂ ಏರ್ಪಡಿಸಲಾಗಿತ್ತು. ಕೆಲವು ಬಾಲಕಬಾಲಕಿಯರು ಭಾಗವಹಿಸಿದ್ದು ಉತ್ತಮ ಫಲಿತಾಂಶವನ್ನು ನೀಡಿದರು.

---

# ಮಹಾಜನರಲ್ಲಿ ಬಿನ್ನಹ

ಅಧ್ಯಾತ್ಮಪ್ರಕಾಶಕಾರ್ಯಾಲಯದ ಮೂಲಕ ಪ್ರಕಟವಾಗಿದ್ದು ಈಗ ಪ್ರತಿಗಳು ಖರ್ಚಾಗಿರುವ ಕೆಲವು ಉಪಯುಕ್ತ ಗ್ರಂಥಗಳನ್ನು ಪುನರ್ಮುದ್ರಣ ಮಾಡಿಸುವ ಏರ್ಪಾಡುಮಾಡಿ ಈಗಾಗಲೆ ಬ್ರಹ್ಮಸೂತ್ರಭಾಷ್ಯದ ಎರಡು ಸಂಪುಟಗಳನ್ನು ಮುದ್ರಣಶಾಲೆಗೆ ಕಳುಹಿಸಿರುವದು ಮಹಾಜನರಿಗೆ ತಿಳಿದೇ ಇದೆ. ಆದರೂ ನಮ್ಮಲ್ಲಿಯ ಮುದ್ರಣಸೌಕರ್ಯಗಳ ಪರಿಮಿತಿಯಿಂದ ಕೆಲಸವು ಬಹಳ ವಿಳಂಬವಾಗುತ್ತಿದ್ದು ಮಹಾಜನರಿಗೆ ಗ್ರಂಥಗಳು ಕೈಸೇರಲು ತಡವಾಗುತ್ತಿದೆ. ಆದ್ದರಿಂದ ನಾವು ಕೆಲವು ಗ್ರಂಥಗಳನ್ನು ಪರಸ್ಥಳಗಳಲ್ಲಿಯಾದರೂ ಮುದ್ರಿಸಲು ಏರ್ಪಾಡು ಮಾಡಬೇಕೆಂದಿದ್ದೇವೆ. ಪುನರ್ಮುದ್ರಿತವಾಗಬೇಕಾಗಿರುವ ಗ್ರಂಥಗಳು ಹೀಗಿವೆ.

| | | |
|---|---|---|
| ೧) | ಭಗವದ್ಗೀತೆಯ ಉಪನ್ಯಾಸಗಳು. (೧ ರಿಂದ ೭ ಭಾಗಗಳು)<br>(ಇದನ್ನು ಎರಡುಸಂಪುಟಗಳಲ್ಲಿ ಹೊರತರಲಾಗುವದು) | ಪುಟಗಳು<br>ಡೆಮ್ಮಿ ೧೨೬೮ |
| ೨) | ಶ್ರೀ ಶಂಕರಭಗವತ್ಪಾದರ ಸರ್ವಸಮ್ಮತೋಪದೇಶಗಳು | ೩೮೨ |
| ೩) | ಛಾಂದೋಗ್ಯೋಪನಿಷದ್ಭಾಷ್ಯ | ೧೨೦೦ |
| ೪) | ಬೃಹದಾರಣ್ಯಕೋಪನಿಷದ್ಭಾಷ್ಯ- ೨ ಸಂಪುಟಗಳು | ೧೯೦೦ |
| ೫) | ಪ್ರಕರಣಗಳು ಸಂಪುಟ-೧<br>(ಉಪದೇಶಸಾಹಸ್ರೀ-ಅಪರೋಕ್ಷಾನುಭೂತಿ Etc.) | ೫೩೦ |
| ೬) | Science of Reality | ೫೮೮ |
| ೭) | How to Recognise the Method of Vedanta | ೧೩೦ |
| ೮) | Minor Works of Shankaracharya | ೮೦ |

ಇವುಗಳ ಪುನರ್ಮುದ್ರಣವನ್ನು ಅಚ್ಚುಕಟ್ಟಾಗಿ ಸಕಾಲಕ್ಕೆ ಮಾಡಿಕೊಡಲು ಇಷ್ಟವುಳ್ಳ ಮುದ್ರಣಾಲಯಗಳವರು ತಮ್ಮ ಕನಿಷ್ಠ ಮುದ್ರಣದರವನ್ನು ನಮೂದಿಸಿ ಕಾರ್ಯಾಲಯಕ್ಕೆ ಬರೆದುಕೊಳ್ಳಬೇಕು. ಮಹಾಜನರಿಂದ ಗ್ರಂಥಪ್ರಕಟನೆಗೆ ಸಹಾಯವು ದೊರಕಿದಂತೆಲ್ಲ ಮುದ್ರಣದ ಆರ್ಡರುಗಳನ್ನು ಕೊಡಲಾಗುವದು. ಉದಾರಾಶಯರಾದ ದಾನಿಗಳು ಆಯಾ ಗ್ರಂಥದ ಮುದ್ರಣವೆಚ್ಚ, ಅಥವಾ ಅದರ ಭಾಗಾಂಶಗಳನ್ನು ದಾನಮಾಡುವ ಮೂಲಕ ಮುಂದೆ ಬಂದು ನಮ್ಮನ್ನು ಪ್ರೋತ್ಸಾಹಿಸಬೇಕಾಗಿ ಪ್ರಾರ್ಥನೆ. ದಾನಿಗಳಿಗೆ ಅವರ ಇಷ್ಟಾನುಸಾರ 250 ಪ್ರತಿಗಳವರೆಗೂ ಆಯಾ ಗ್ರಂಥಗಳನ್ನು ಮುಫತ್ತಾಗಿ ಕೊಡಲಾಗುವದು. ಹೆಚ್ಚಿನ ವಿವರಗಳಿಗೆ ಕಾರ್ಯದರ್ಶಿಗಳಿಗೆ ಬರೆಯಿರಿ.

ಮಹಾತ್ಮಾನೋ ಮಹಾವೀರ್ಯಾಃ ಶಕ್ರತುಲ್ಯಪರಾಕ್ರಮಾಃ ।
ಏತೇ ಪ್ರತ್ಯೇಕತಃ ಕೋಟಿಕೋಟಿವಾನರಯೂಥಪಾಃ ॥೧೫॥

ತವಾಜ್ಞಾಕಾರಿಣಃ ಸರ್ವೇ ಸರ್ವೇ ದೇವಾಂಶಸಂಭವಾಃ ।
ಏಷ ವಾಲಿಸುತಃ ಶ್ರೀಮಾನಂಗದೋ ನಾಮ ವಿಶ್ರುತಃ ॥೧೬॥

ವಾಲಿತುಲ್ಯಬಲೋ ವೀರೋ ರಾಕ್ಷಸಾನಾಂ ಬಲಾಂತಕಃ ।
ಏತೇ ಚಾನ್ಯೇ ಚ ಬಹವಸ್ತ್ವದರ್ಥೇ ತ್ಯಕ್ತಜೀವಿತಾಃ ॥೧೭॥

ಯೋದ್ಧಾರಃ ಪರ್ವತಾಗ್ರೈಶ್ಚ ನಿಪುಣಾಃ ಶತ್ರುಘಾತನೇ ।
ಆಜ್ಞಾಪಯ ರಘುಶ್ರೇಷ್ಠ ಸರ್ವೇ ತೇ ವಶವರ್ತಿನಃ ॥೧೮॥

೧೫-೧೮. ಮಹಾತ್ಮರೂ ಮಹಾವೀರ್ಯಶಾಲಿಗಳೂ ದೇವೇಂದ್ರನಿಗೆ ಸಮನಾದ ಪರಾಕ್ರಮವುಳ್ಳವರೂ ಆಗಿದ್ದು ಇವರುಗಳು ಬಿಡಿಬಿಡಿಯಾಗಿ ಕೋಟಿ ಕೋಟಿ ಕಪಿಗಳ ಗುಂಪಿಗೆ ಒಡೆಯರಾಗಿರುವರು. ಎಲ್ಲರೂ ನಿನ್ನ ಅಪ್ಪಣೆಯನ್ನು ನಡೆಸುವವರು. ಎಲ್ಲರೂ ದೇವಾಂಶಸಂಭೂತರು. ಇವನು ವಾಲಿಪುತ್ರನಾದ ಅಂಗದನೆಂಬ ಹೆಸರಿನಿಂದ ಪ್ರಸಿದ್ಧನಾದ ಕಪಿಯು. ಇವನು ವಾಲಿಗೆ ಸಮಾನವಾದ ಬಲವುಳ್ಳವನೂ ರಾಕ್ಷಸರ ಬಲವನ್ನು ನಾಶಮಾಡುವವನೂ ಆಗಿರುವನು. ಇವರಲ್ಲದೆ ಇನ್ನೂ ಕೆಲವರು ಎಷ್ಟೋ ಕಪಿಗಳು ನಿನಗಾಗಿಯೇ ಪ್ರಾಣವನ್ನು ಬಿಡಲು ಸಿದ್ಧರಿರುತ್ತಾರೆ. ಬೆಟ್ಟದ ಶಿಖರಗಳಿಂದ ಯುದ್ಧಮಾಡಿ ಶತ್ರುಗಳನ್ನು ನಾಶಗೊಳಿಸುವದರಲ್ಲಿ ನಿಪುಣರಾದವರಾಗಿರುವರು. ರಘುಶ್ರೇಷ್ಠನೆ, ಇವರುಗಳಿಗೆ ಅಪ್ಪಣೆಮಾಡು. ಇವರೆಲ್ಲರೂ ನಿನ್ನ ಆಜ್ಞಾಧಾರಕರಾಗಿರುವರು.

ರಾಮಃ ಸುಗ್ರೀವಮಾಲಿಂಗ್ಯ ಹರ್ಷಪೂರ್ಣಾಶ್ರುಲೋಚನಃ ।
ಪ್ರಾಹ ಸುಗ್ರೀವ ಜಾನಾಸಿ ಸರ್ವಂ ತ್ವಂ ಕಾರ್ಯಗೌರವಮ್ ॥೧೯॥

ಮಾರ್ಗಣಾರ್ಥಂ ಹಿ ಜಾನಕ್ಯಾ ನಿಯುಂಕ್ಷ್ವ ಯದಿ ರೋಚತೇ ।
ಶ್ರುತ್ವಾ ರಾಮಸ್ಯ ವಚನಂ ಸುಗ್ರೀವಃ ಪ್ರೀತಮಾನಸಃ ॥೨೦॥
ಪ್ರೇಷಯಾಮಾಸ ಬಲಿನೋ ವಾನರಾನ್ ವಾನರರ್ಷಭಃ ।

೧೯-೨೦. ರಾಮನು ಸುಗ್ರೀವನನ್ನು ಆಲಿಂಗಿಸಿಕೊಂಡು ಸಂತೋಷದಿಂದುಂಟಾದ ಕಣ್ಣೀರುಳ್ಳವನಾಗಿ ಹೀಗೆಂದನು : "ಸುಗ್ರೀವನೆ, ನೀನು ಎಲ್ಲಾ ಕಾರ್ಯಗಳ ಜವಾಬ್ದಾರಿಯನ್ನೂ ಬಲ್ಲವನು. ನಿನಗೆ ಸರಿಯೆನಿಸಿದರೆ ಸೀತಾದೇವಿಯನ್ನು ಹುಡುಕುವದಕ್ಕಾಗಿ ಕಪಿಗಳನ್ನು ಗೊತ್ತುಮಾಡಿ ನೀನೇ ಅಪ್ಪಣೆ ಮಾಡು." ಸಂತುಷ್ಟಮನಸ್ಕನಾದ ವಾನರಶ್ರೇಷ್ಠನಾದ ಸುಗ್ರೀವನು ರಾಮನ ಮಾತನ್ನು ಕೇಳಿ ಬಲಿಷ್ಠರಾದ ಕಪಿಗಳನ್ನು ಕಳುಹಿಸಲು ಅಪ್ಪಣೆಮಾಡಿದನು.

ದಿಕ್ಷು ಸರ್ವಾಸು ವಿವಿಧಾನ್ ವಾನರಾನ್ ಪ್ರೇಷ್ಯ ಸತ್ವರಮ್ ।
ದಕ್ಷಿಣಾಂ ದಿಶಮತ್ಯರ್ಥಂ ಪ್ರಯತ್ನೇನ ಮಹಾಬಲಾನ್ ॥೨೧॥
ಯುವರಾಜಂ ಜಾಂಬವಂತಂ ಹನೂಮಂತಂ ಮಹಾಬಲಮ್ ।
ನಲಂ ಸುಷೇಣಂ ಶರಭಂ ಮೈಂದಂ ದ್ವಿವಿದಮೇವ ಚ ॥೨೨॥
ಪ್ರೇಷಯಾಮಾಸ ಸುಗ್ರೀವೋ ವಚನಂ ಚೇದಮಬ್ರವೀತ್ ।
ವಿಚಿನ್ವಂತು ಪ್ರಯತ್ನೇನ ಭವಂತೋ ಜಾನಕೀಂ ಶುಭಾಮ್ ॥೨೩॥
ಮಾಸಾದರ್ವಾಗ್ ನಿವರ್ತಧ್ವಂ ಮಚ್ಛಾಸನಪುರಸ್ಸರಾಃ ॥
ಸೀತಾಮದೃಷ್ಟ್ವಾ ಯದಿ ವೋ ಮಾಸದೂರ್ಧ್ವಂ ದಿನಂ ಭವೇತ್ ॥೨೪॥
ತದಾ ಪ್ರಾಣಾಂತಿಕಂ ದಂಡಂ ಮತ್ತಃ ಪ್ರಾಪ್ಸ್ಯಥ ವಾನರಾಃ ।
ಇತಿ ಪ್ರಸ್ಥಾಪ್ಯ ಸುಗ್ರೀವೋ ವಾನರಾನ್ ಭೀಮವಿಕ್ರಮಾನ್ ॥೨೫॥
ರಾಮಸ್ಯ ಪಾರ್ಶ್ವೇ ಶ್ರೀರಾಮಂ ನತ್ವಾ ಚೋಪವಿವೇಶ ಸಃ ॥

೨೧-೨೫. ಎಲ್ಲ ದಿಕ್ಕುಗಳಿಗೂ ಜಾಗ್ರತೆಯಾಗಿ ಕಪಿಗಳನ್ನು ಕಳುಹಿಸಿ ವಿಶೇಷವಾಗಿ ದಕ್ಷಿಣದಿಕ್ಕಿಗೆ ಹೆಚ್ಚಿನ ಪ್ರಯತ್ನಮಾಡುವಂಥ ಮಹಾಬಲಿಷ್ಠರಾದ ಜಾಂಬವಂತ, ಯುವರಾಜನಾದ ಅಂಗದ, ಬಲಶಾಲಿಯಾದ ಹನುಮಂತ, ನಲ, ಸುಷೇಣ, ಶರಭ, ಮೈಂದ, ದ್ವಿವಿದ- ಇವರುಗಳನ್ನು ಸುಗ್ರೀವನು ಕಳುಹಿಸಿದವನಾಗಿ ಈ ಮಾತನ್ನು ಹೇಳಿದನು : "ನೀವುಗಳು ಪ್ರಯತ್ನಮಾಡಿ ಶುಭಳಾದ ಜಾನಕಿಯನ್ನು ಹುಡುಕಿರಿ. ನನ್ನ ಅಪ್ಪಣೆಯನ್ನು ಗೌರವಿಸಿ ಒಂದು ತಿಂಗಳೊಳಗಾಗಿ ಹಿಂದಿರುಗಿ ಬನ್ನಿರಿ. ಸೀತೆಯನ್ನು ಕಾಣದೆ ಒಂದು ತಿಂಗಳ ಕಾಲ ಮೀರಿದಮೇಲೆ ಒಂದು ದಿನವಾದರೂ ತಡವಾಗಿ ಹಿಂದಿರುಗುವಿರಾದರೆ- "ಎಲೈ ಕಪಿಗಳೆ ನೀವು ಪ್ರಾಣವನ್ನು ತೆರುವ ದಂಡವನ್ನು ಹೊಂದುವಿರಿ." ಹೀಗೆಂದು ಹೇಳಿ ಭಯಂಕರಪರಾಕ್ರಮರಾದ ಕಪಿಗಳನ್ನು ಕಳುಹಿಸಿಕೊಟ್ಟು ಸುಗ್ರೀವನು ಶ್ರೀರಾಮನ ಬಳಿಗೆ ಬಂದು ನಮಸ್ಕರಿಸಿ ಕುಳಿತುಕೊಂಡನು.

ಗಚ್ಛಂತಂ ಮಾರುತಿಂ ದೃಷ್ಟ್ವಾ ರಾಮೋ ವಚನಮಬ್ರವೀತ್ ।
ಅಭಿಜ್ಞಾನಾರ್ಥಮೇತನ್ಮೇ ಹ್ಯಂಗುಲೀಯಕಮುತ್ತಮಮ್ ॥೨೬॥
ಮನ್ನಾಮಾಕ್ಷರಸಂಯುಕ್ತಂ ಸೀತಾಯೈ ದೀಯತಾಂ ರಹಃ ।
ಅಸ್ಮಿನ್ ಕಾರ್ಯೇ ಪ್ರಮಾಣಂ ಹಿ ತ್ವಮೇವ ಕಪಿಸತ್ತಮ ॥೨೭॥
ಜಾನಾಮಿ ಸತ್ವಂ ತೇ ಸರ್ವಂ ಗಚ್ಛ ಪಂಥಾಃ ಶುಭಸ್ತವ ।
ಏವಂ ಕಪೀನಾಂ ರಾಜ್ಞಾ ತೇ ವಿಸೃಷ್ಟಾಃ ಪರಿಮಾರ್ಗಣೇ ॥೨೮॥
ಸೀತಾಯಾ ಅಂಗದಮುಖಾ ಬಭ್ರಮುಸ್ತತ್ರ ತತ್ರ ಹ ।

೨೬-೨೮. ಹೊರಡುತ್ತಿರುವ ಹನುಮಂತನನ್ನು ಕಂಡು ರಾಮನು ಹೀಗೆಂದನು : 'ಈ ನನ್ನ ಹೆಸರಿನ ಅಕ್ಷರಗಳುಳ್ಳ ಉಂಗುರವನ್ನು ಗುರುತಿಗಾಗಿ ಸೀತಾ

ದೇವಿಗೆ ರಹಸ್ಯದಲ್ಲಿ ಕೊಡುವವನಾಗು; ಎಲೈ ಕಪಿಶ್ರೇಷ್ಠನೆ, ಈ ಕೆಲಸದಲ್ಲಿ ನೀನು ಮಾತ್ರವೇ ನಂಬಿಕೆಗೆ ಅರ್ಹನು. ಏಕೆಂದರೆ ನಿನ್ನ ಬಲಪರಾಕ್ರಮಗಳನ್ನು ನಾನು ಬಲ್ಲೆನು. ನಿನಗೆ ದಾರಿಯು ಶುಭಕರವಾಗಲಿ! ಇನ್ನು ಹೊರಡು' ಎಂದನು. ಹೀಗೆ ಕಪಿರಾಜನಿಂದ ಸೀತೆಯನ್ನು ಹುಡುಕುವದಕ್ಕಾಗಿ ಕಳುಹಿಸಲ್ಪಟ್ಟ ಅಂಗದನೇ ಮುಂತಾದ ಕಪಿಗಳು ಅಲ್ಲಲ್ಲಿ ಅಲೆಯುತ್ತಿದ್ದರು.

ಭ್ರಮಂತೋ ವಿಂಧ್ಯಗಹನೇ ದದೃಶುಃ ಪರ್ವತೋಪಮಮ್ ।
ರಾಕ್ಷಸಂ ಭೀಷಣಾಕಾರಂ ಭಕ್ಷಯಂತಂ ಮೃಗಾನ್ ಗಜಾನ್ ॥೨೯॥
ರಾವಣೋಽಯಮಿತಿ ಜ್ಞಾತ್ವಾ ಕೇಚಿದ್ ವಾನರಪುಂಗವಾಃ ।
ಜಘ್ನುಃ ಕಿಲಕಿಲಾಶಬ್ದಂ ಮುಂಚಂತೋ ಮುಷ್ಟಿಭಿಃ ಕ್ಷಣಾತ್ ॥೩೦॥
ನಾಯಂ ರಾವಣ ಇತ್ಯುಕ್ತ್ವಾ ಯಯುರನ್ಯನ್ಮಹದ್ವನಮ್ ।

೨೯-೩೦. ದಟ್ಟವಾದ ವಿಂಧ್ಯಪರ್ವತದ ಕಾಡಿನಲ್ಲಿ ಅಡ್ಡಾಡುತ್ತಾ ಪರ್ವತದಂತೆ ದೇಹವುಳ್ಳ ಭಯಂಕರಾಕೃತಿಯ ಹಾಗೂ ಪ್ರಾಣಿಗಳನ್ನೂ ಆನೆಗಳನ್ನೂ ತಿನ್ನುತ್ತಿರುವ ಒಬ್ಬ ರಾಕ್ಷಸನನ್ನು ಕಂಡರು. ಕೆಲವು ವಾನರಶ್ರೇಷ್ಠರು ಈತನೇ ರಾವಣನೆಂದು ಭಾವಿಸಿ ಕ್ಷಣಮಾತ್ರದಲ್ಲಿ ತಮ್ಮ ಮುಷ್ಟಿಗಳಿಂದ ಗುದ್ದುತ್ತಾ ಕಿಲಕಿಲನೆ ಶಬ್ದಮಾಡಿದರು. ಆದರೆ ಇವನು ರಾವಣನಲ್ಲ-ಎಂದು ತಿಳಿದವರಾಗಿ ಬೇರೊಂದು ಕಾಡಿಗೆ ಹೊರಟರು.

ತೃಷಾರ್ತಾಃ ಸಲಿಲಂ ತತ್ರ ನಾವಿಂದನ್ ಹರಿಪುಂಗವಾಃ ।
ವಿಭ್ರಮಂತೋ ಮಹಾರಣ್ಯೇ ಶುಷ್ಕಕಂಠೋಷ್ಠತಾಲುಕಾಃ ॥೩೧॥
ದದೃಶುರ್ಗಹ್ವರಂ ತತ್ರ ತೃಣಗುಲ್ಮಾವೃತಂ ಮಹತ್ ।
ಆರ್ದ್ರಪಕ್ಷಾನ್ ಕ್ರೌಂಚಹಂಸಾನ್ ನಿಃಸೃತಾನ್ ದದೃಶುಃ ತತಃ ॥೩೨॥
ಅತ್ರಾಸ್ತೇ ಸಲಿಲಂ ನೂನಂ ಪ್ರವಿಶಾಮೋ ಮಹಾಗುಹಾಮ್ ।
ಇತ್ಯುಕ್ತ್ವಾ ಹನುಮಾನಗ್ರೇ ಪ್ರವಿವೇಶ ತಮನ್ವಯುಃ ॥೩೩॥

೩೧-೩೩. ಅಲ್ಲಿ ಎಲ್ಲಿಯೂ ನೀರು ದೊರೆಯದ ಕಾರಣ, ಬಾಯಾರಿದವರಾಗಿ ಆ ಕಪಿಶ್ರೇಷ್ಠರು ಒಣಗಿದ ಗಂಟಲು-ನಾಲಗೆಗಳುಳ್ಳವರಾಗಿ ತಿರುಗುತ್ತಾ ಆ ಮಹಾಕಾಡಿನಲ್ಲಿ ಒಂದು ದಟ್ಟವಾದ ಹಾಗೂ ಹುಲ್ಲುಪೊದೆಗಳಿಂದ ಮುಚ್ಚಲ್ಪಟ್ಟಿದ್ದ ಗುಹೆಯನ್ನು ನೋಡಿದರು. ಅನಂತರ ಒದ್ದೆಯಾದ ರೆಕ್ಕೆಗಳುಳ್ಳ ಕ್ರೌಂಚ, ಹಂಸ- ಮುಂತಾದ ಹಕ್ಕಿಗಳು ಹೊರಬಂದದ್ದನ್ನು ಕಂಡರು. 'ಇಲ್ಲಿ ನೀರು ಖಂಡಿತವಾಗಿಯೂ ಇದೆ; ಈ ದೊಡ್ಡ ಗುಹೆಯೊಳಕ್ಕೆ ಹೋಗೋಣ'- ಎಂದುಕೊಂಡು ಹನುಮಂತನು ಮುಂದಾಗಿ ಒಳಹೊಕ್ಕನು. ಉಳಿದವರು ಅವನನ್ನು ಅನುಸರಿಸಿದರು.

ಸರ್ವೇ ಪರಸ್ಪರಂ ಧೃತ್ವಾ ಬಾಹೂನ್ ಬಾಹುಭಿರುತ್ಸುಕಾಃ ।
ಅಂಧಕಾರೇ ಮಹದ್ದೂರಂ ಗತ್ವಾಽಪಶ್ಯನ್ ಕಪೀಶ್ವರಾಃ ॥೩೪॥
ಜಲಾಶಯಾನ್ ಮಣಿನಿಭತೋಯಾನ್ ಕಲ್ಪದ್ರುಮೋಪಮಾನ್ ।
ವೃಕ್ಷಾನ್ ಪಕ್ವಫಲೈರ್ನಮ್ರಾನ್ ಮಧುದ್ರೋಣಸಮನ್ವಿತಾನ್ ॥೩೫॥
ಗೃಹಾನ್ ಸರ್ವಗುಣೋಪೇತಾನ್ ಮಣಿವಸ್ತ್ರಾದಿಪೂರಿತಾನ್ ।
ದಿವ್ಯಭಕ್ಷ್ಯಾನ್ನಸಹಿತಾನ್ ಮಾನುಷೈಃ ಪರಿವರ್ಜಿತಾನ್ ॥೩೬॥

೩೪-೩೬. ಎಲ್ಲರೂ ಅನ್ಯೋನ್ಯವಾಗಿ ತೋಳುಗಳನ್ನು ಹಿಡಿದುಕೊಂಡು ಕುತೂಹಲದಿಂದ ಕತ್ತಲೆಯಲ್ಲಿಯೇ ಬಹಳ ದೂರ ಹೋಗಿ ಆ ಕಪಿಶ್ರೇಷ್ಠರು-ಸ್ಫಟಿಕಮಣಿಯಂತೆ ಸ್ವಚ್ಛವಾದ ನೀರುಳ್ಳ ಕೆರೆಗಳನ್ನೂ ಕಲ್ಪವೃಕ್ಷದಂಥ ಹಾಗೂ ಚೆನ್ನಾಗಿ ಪಕ್ವವಾಗಿ ಬಾಗಿರುವ ರೆಂಬೆಗಳುಳ್ಳ ಹಣ್ಣಿನ ಮರಗಳನ್ನೂ ಅವುಗಳಲ್ಲಿ ಕೊಳಗಗಟ್ಟಲೆ ರಸವುಳ್ಳ ಜೇನಿನ ಗೂಡುಗಳನ್ನೂ ಒಡವೆ, ವಸ್ತ್ರಗಳಿಂದ ತುಂಬಿದ ಹಾಗೂ ದಿವ್ಯವಾದ ತಿಂಡಿಗಳು, ಊಟಗಳಿಂದ ಕೂಡಿ ಸಕಲ ಸೌಕರ್ಯ ವಿಶಿಷ್ಟವಾದ ಮನೆಗಳನ್ನೂ ಕಂಡರು. ಆದರೆ ಮನುಷ್ಯರಾರೂ ಅಲ್ಲಿರಲಿಲ್ಲ.

ವಿಸ್ಮಿತಾಸ್ತತ್ರ ಭವನೇ ದಿವ್ಯೇ ಕನಕವಿಷ್ಟರೇ ।
ಪ್ರಭಯಾ ದೀಪ್ಯಮಾನಾಂ ತು ದದೃಶುಃ ಸ್ತ್ರಿಯಮೇಕಕಾಮ್ ॥೩೭॥
ಧ್ಯಾಯಂತೀಂ ಚೀರವಸನಾಂ ಯೋಗಿನೀಂ ಯೋಗಮಾಸ್ಥಿತಾಮ್ ।
ಪ್ರಣೇಮುಸ್ತಾಂ ಮಹಾಭಾಗಾ ಭಕ್ತ್ಯಾ ಭೀತ್ಯಾ ಚ ವಾನರಾಃ ॥೩೮॥
ದೃಷ್ಟ್ವಾ ತಾನ್ ವಾನರಾನ್ ದೇವೀ ಪ್ರಾಹ ಯೂಯಂ ಕಿಮಾಗತಾಃ।
ಕುತೋ ವಾ ಕಸ್ಯ ವಾ ದೂತಾಃ ಮತ್ಸ್ಥಾನಂ ಕಿಂ ಪ್ರಧರ್ಷಥ ।೩೯॥

೩೭-೩೯. ಆಶ್ಚರ್ಯಗೊಂಡವರಾಗಿ ಆ ಕಪಿಗಳು ಅಲ್ಲಿ ಚಿನ್ನದ ಪೀಠದ ಮೇಲೆ ಕುಳಿತು ಧ್ಯಾನಮಾಡುತ್ತಾ ತನ್ನ ಕಾಂತಿಯಿಂದ ಹೊಳೆಯುತ್ತಿರುವ ಹಾಗೂ ನಾರುಮಡಿಗಳನ್ನುಟ್ಟು ಯೋಗತತ್ಪರಳಾಗಿದ್ದ ಒಬ್ಬ ಹೆಂಗಸನ್ನು ಕಂಡರು. ಭಯಭಕ್ತಿಗಳಿಂದ ಆ ಮಹಾಭಾಗಳಿಗೆ ವಾನರರೆಲ್ಲರೂ ನಮಸ್ಕಾರ ಮಾಡಿದರು. ಆ ಕಪಿಗಳನ್ನು ನೋಡಿದ ಆಕೆಯು 'ನೀವುಗಳು ಏಕೆ ಬಂದಿರಿ? ಎಲ್ಲಿಂದ? ಯಾರ ಸೇವಕರು ನೀವು? ನನ್ನ ಈ ಜಾಗವನ್ನೇಕೆ ಆಕ್ರಮಿಸಿದ್ದೀರಿ?' ಎಂದು ಕೇಳಿದಳು.

ತಚ್ಛ್ರುತ್ವಾ ಹನುಮಾನಾಹ ಶೃಣು ವಕ್ಷ್ಯಾಮಿ ದೇವಿ ತೇ ।
ಅಯೋಧ್ಯಾಧಿಪತಿಃ ಶ್ರೀಮಾನ್ ರಾಜಾ ದಶರಥಃ ಪ್ರಭುಃ ॥೪೦॥
ತಸ್ಯ ಪುತ್ರೋ ಮಹಾಭಾಗೋ ಜ್ಯೇಷ್ಠೋ ರಾಮ ಇತಿ ಶ್ರುತಃ ।
ಪಿತುರಾಜ್ಞಾಂ ಪುರಸ್ಕೃತ್ಯ ಸಭಾರ್ಯಃ ಸಾನುಜೋ ವನಮ್ ॥೪೧॥

ಗತೇಸ್ತತ್ರ ಹೃತಾ ಭಾರ್ಯಾ ತಸ್ಯ ಸಾಧ್ವೀ ದುರಾತ್ಮನಾ ।
ರಾವಣೇನ ತತೋ ರಾಮಃ ಸುಗ್ರೀವಂ ಸಾನುಜೋ ಯಯೌ ॥೪೨॥
ಸುಗ್ರೀವೋ ಮಿತ್ರಭಾವೇನ ರಾಮಸ್ಯ ಪ್ರಿಯವಲ್ಲಭಾಮ್ ।
ಮೃಗಯಧ್ವಮಿತಿ ಪ್ರಾಹ ತತೋ ವಯಮುಪಾಗತಾಃ ॥೪೩॥

೪೦–೪೩. ಅದನ್ನು ಕೇಳಿ ಹನುಮಂತನು ಹೀಗೆಂದನು : 'ಎಲೌ ದೇವಿಯೆ, ಕೇಳು; ಹೇಳುವೆನು. ಅಯೋಧ್ಯೆಗೆ ಒಡೆಯನಾದ ಶ್ರೀಮಂತನಾದ ದಶರಥಮಹಾರಾಜನ ಹಿರಿಯ ಮಗನು ರಾಮನೆಂದು ಪ್ರಸಿದ್ಧನಾಗಿರುವನು. ಆತನು ತಂದೆಯ ಅಪ್ಪಣೆಯನ್ನು ಗೌರವಿಸಿ ತಮ್ಮ ಹಾಗೂ ಹೆಂಡತಿಯೊಡನೆ ಕಾಡಿಗೆ ಹೋದನು. ಅಲ್ಲಿ ದುರಾತ್ಮನಾದ ರಾವಣನಿಂದ ಪತಿವ್ರತೆಯಾದ ಅವನ ಹೆಂಡತಿಯು ಕದಿಯಲ್ಪಟ್ಟಳು. ಅನಂತರ ರಾಮನು ಸಹೋದರನೊಡನೆ ಸುಗ್ರೀವನ ಬಳಿಗೆ ಬಂದನು. ಸುಗ್ರೀವನು ಸ್ನೇಹಭಾವದಿಂದ ರಾಮನ ಪ್ರೀತಿಯ ಹೆಂಡತಿಯನ್ನು ಹುಡುಕಿ ತನ್ನಿರಿ–ಎಂದು ನಮಗೆ ಹೇಳಿದನು. ಆಗ ನಾವುಗಳು ಬಂದೆವು.

ತತೋ ವನಂ ವಿಚಿನ್ವಂತೋ ಜಾನಕೀಂ ಜಲಕಾಂಕ್ಷಿಣಃ ।
ಪ್ರವಿಷ್ಟಾ ಗಹ್ವರಂ ಘೋರಂ ದೈವಾದತ್ರ ಸಮಾಗತಾಃ ॥೪೪॥
ತ್ವಂ ವಾ ಕಿಮರ್ಥಮತ್ರಾಸಿ ಕಾ ವಾ ತ್ವಂ ವದ ನಃ ಶುಭೇ ।
ಯೋಗಿನೀ ಚ ತಥಾ ದೃಷ್ಟ್ವಾ ವಾನರಾನ್ ಪ್ರಾಹ ಹೃಷ್ಟಧೀಃ ॥೪೫॥
ಯಥೇಷ್ಟಂ ಫಲಮೂಲಾನಿ ಜಗ್ಧ್ವಾ ಪೀತ್ವಾಮೃತಂ ಪಯಃ ।
ಆಗಚ್ಛಥ ತತೋ ವಕ್ಷ್ಯೇ ಮಮ ವೃತ್ತಾಂತಮಾದಿತಃ ॥೪೬॥

೪೪–೪೬. ಅನಂತರ ಕಾಡಿನಲ್ಲಿ ಸೀತೆಯನ್ನು ಹುಡುಕುತ್ತಾ ನೀರಿನ ಬಯಕೆಯಿಂದ ಭಯಂಕರವೂ ಗಹನವೂ ಆದ (ಗುಹೆ)ಯನ್ನು ಹೊಕ್ಕು ಅದೃಷ್ಟವಶದಿಂದ ಇಲ್ಲಿಗೆ ಬಂದು ಸೇರಿದೆವು. ನೀನಾದರೊ, ಏತಕ್ಕಾಗಿ ಇಲ್ಲಿರುವೆ? ನೀನು ಯಾರು ? ಎಲೈ ಶುಭಳೆ, ನಮಗೆ ಹೇಳು' ಎಂದನು. ಆ ಯೋಗಿನಿಯು ಆ ಸ್ಥಿತಿಯಲ್ಲಿದ್ದ ಕಪಿಗಳಿಗೆ ಸಂತೋಷದಿಂದ ಹೀಗೆಂದಳು. 'ನೀವುಗಳು ಇಷ್ಟಬಂದಷ್ಟು ಹಣ್ಣುಗಳನ್ನೂ ಗೆಡ್ಡೆಗಳನ್ನೂ ತಿಂದು ಅಮೃತಸಮಾನವಾದ ನೀರನ್ನು ಕುಡಿದು ಬನ್ನಿರಿ. ಅನಂತರ ನನ್ನ ಕಥೆಯನ್ನು ಪ್ರಾರಂಭದಿಂದ ಹೇಳುವೆನು'–ಎಂದಳು.

ತಥೇತಿ ಭುಕ್ತ್ವಾ ಪೀತ್ವಾ ಚ ಹೃಷ್ಟಾಸ್ತೇ ಸರ್ವವಾನರಾಃ ।
ದೇವ್ಯಾಃ ಸಮೀಪಂ ಗತ್ವಾ ತೇ ಬದ್ಧಾಂಜಲಿಪುಟಾಃ ಸ್ಥಿತಾಃ ॥೪೭॥
ತತಃ ಪ್ರಾಹ ಹನೂಮಂತಂ ಯೋಗಿನೀ ದಿವ್ಯದರ್ಶನಾ ।
ಹೇಮಾ ನಾಮ ಪುರಾ ದಿವ್ಯರೂಪಿಣೀ ವಿಶ್ವಕರ್ಮಣಃ ॥೪೮॥

ಪುತ್ರೀ ಮಹೇಶಂ ನೃತ್ಯೇನ ತೋಷಯಾಮಾಸ ಭಾಮಿನೀ ।
ತುಷ್ಟೋ ಮಹೇಶಃ ಪ್ರದದಾವಿದಂ ದಿವ್ಯಪುರಂ ಮಹತ್ ॥೪೯॥
ಅತ್ರ ಸ್ಥಿತಾ ಸಾ ಸುದತೀ ವರ್ಷಾಣಾಮಯುತಾಯುತಮ್ ।
ತಸ್ಯಾ ಅಹಂ ಸಖೀ ವಿಷ್ಣುತತ್ಪರಾ ಮೋಕ್ಷಕಾಂಕ್ಷಿಣೀ ॥೫೦॥
ನಾಮ್ನಾ ಸ್ವಯಂಪ್ರಭಾ ದಿವ್ಯಗಂಧರ್ವತನಯಾ ಪುರಾ ।

೪೭-೫೦. ಹಾಗೆಯೇ ಆಗಲೆಂದು ತಿಂದು-ಕುಡಿದು ಸಂತುಷ್ಟರಾಗಿ ಆ ಕಪಿಗಳೆಲ್ಲರೂ ದೇವಿಯ ಹತ್ತಿರಕ್ಕೆ ಬಂದು ಕೈಗಳನ್ನು ಮುಗಿದುಕೊಂಡು ನಿಂತರು. ಅನಂತರ ಹನುಮಂತನನ್ನು ಕುರಿತು ದಿವ್ಯದೃಷ್ಟಿಯುಳ್ಳ ಆ ಯೋಗಿನಿಯು ಹೀಗೆಂದಳು : ವಿಶ್ವಕರ್ಮನ ಮಗಳಾದ ದಿವ್ಯಸುಂದರಿಯಾದ ಹೇಮಾ ಎಂಬ ಸ್ತ್ರೀಯು ಹಿಂದೆ ಈಶ್ವರನನ್ನು ತನ್ನ ನಾಟ್ಯದಿಂದ ಸಂತೋಷಗೊಳಿಸಿದಳು. ತೃಪ್ತನಾದ ಈಶ್ವರನು ದೊಡ್ಡದಾದ ದಿವ್ಯವಾದ ಈ ಪುರವನ್ನು ಅವಳಿಗೆ ಅನುಗ್ರಹಿಸಿದನು. ಶೋಭನವಾದ ದಂತಪಂಕ್ತಿಯುಳ್ಳ ಆಕೆಯು ಇಲ್ಲಿ ಒಂದು ಲಕ್ಷ ವರ್ಷಗಳ ಕಾಲ ಇದ್ದುಕೊಂಡಿದ್ದಳು. ಆಕೆಯ ಸ್ನೇಹಿತೆಯಾದ ನಾನು ವಿಷ್ಣುವನ್ನೇ ತತ್ಪರಳಾಗಿ ಚಿಂತಿಸುತ್ತಾ ಮೋಕ್ಷವನ್ನು ಬಯಸಿಕೊಂಡಿರುವೆನು. ನಾನು ಹಿಂದೆ ಸ್ವಯಂಪ್ರಭೆ ಎಂಬ ಹೆಸರಿನವಳಾಗಿ ಒಬ್ಬ ಗಂಧರ್ವನ ಮಗಳಾಗಿದ್ದೆನು.

ಗಚ್ಛಂತೀ ಬ್ರಹ್ಮಲೋಕಂ ಸಾ ಮಾಮಾಹೇದಂ ತಪಶ್ಚರ ।
ಅತ್ರೈವ ನಿವಸಂತೀ ತ್ವಂ ಸರ್ವಪ್ರಾಣಿವಿವರ್ಜಿತೇ ॥೫೧॥
ತ್ರೇತಾಯುಗೇ ದಾಶರಥಿರ್ಭೂತ್ವಾ ನಾರಾಯಣೋಽವ್ಯಯಃ ।
ಭೂಭಾರಹರಣಾರ್ಥಾಯ ವಿಚರಿಷ್ಯತಿ ಕಾನನೇ ॥೫೨॥
ಮಾರ್ಗಂತೋ ವಾನರಾಸ್ತಸ್ಯ ಭಾರ್ಯಾಮಾಯಾಂತಿ ತೇ ಗುಹಾಮ್ ।
ಪೂಜಯಿತ್ವಾಽಥ ತಾನ್ ನತ್ವಾ ರಾಮಂ ಸ್ತುತ್ವಾ ಪ್ರಯತ್ನತಃ ॥೫೩॥
ಯಾತಾಸಿ ಭವನಂ ವಿಷ್ಣೋರ್ಯೋಗಿಗಮ್ಯಂ ಸನಾತನಮ್ ।

೫೧-೫೩. ಆಕೆಯು ಬ್ರಹ್ಮಲೋಕವನ್ನು ಕುರಿತು ಹೊರಟವಳಾಗಿ ನನ್ನನ್ನು ಹೀಗೆಂದಳು : 'ಯಾವ ಪ್ರಾಣಿಗಳೂ ಇಲ್ಲದ ಇಲ್ಲಿಯೇ ವಾಸವಾಗಿದ್ದು ಕೊಂಡು ನೀನು ತಪಸ್ಸನ್ನು ಮಾಡು. ಅವ್ಯಯನಾದ ನಾರಾಯಣನು ತ್ರೇತಾಯುಗದಲ್ಲಿ ದಶರಥನ ಮಗನಾಗಿ ಅವತಾರಮಾಡಿ ಭೂಭಾರವನ್ನು ಕಳೆಯುವದಕ್ಕಾಗಿ ಕಾಡಿನಲ್ಲಿ ಸಂಚರಿಸಲಿರುವನು. ಅವನ ಹೆಂಡತಿಯನ್ನು ಹುಡುಕುತ್ತಾ ಕಪಿಗಳು ನಿನ್ನ ಗುಹೆಗೆ ಬರಲಿರುವರು. ಪ್ರಯತ್ನಪೂರ್ವಕವಾಗಿ ಅವರೆಲ್ಲರನ್ನೂ ಸತ್ಕರಿಸಿ ನಮಸ್ಕರಿಸಿ ರಾಮನನ್ನು ಸ್ತೋತ್ರಮಾಡಿ, ಅನಂತರ ಯೋಗಿಗಳು ಮಾತ್ರ ಪ್ರವೇಶಿಸುವಂಥ ಸನಾತನವಾದ ವಿಷ್ಣುವಿನ ಮಂದಿರವನ್ನು ಪಡೆಯಲಿರುವೆ.'

ಇತೋಽಹಂ ಗಂತುಮಿಚ್ಛಾಮಿ ರಾಮಂ ದ್ರಷ್ಟುಂ ತ್ವರಾನ್ವಿತಾ ।
ಯೂಯಂ ಪಿದಧ್ವಮಕ್ಷೀಣಿ ಗಮಿಷ್ಯಥ ಬಹಿರ್ಗುಹಾಮ್ ॥೫೪॥
ತಥೈವ ಚಕ್ರುಸ್ತೇ ವೇಗಾದ್ ಗತಾಃ ಪೂರ್ವಸ್ಥಿತಂ ವನಮ್ ।
ಸಾಪಿ ತ್ಯಕ್ತ್ವಾ ಗುಹಾಂ ಶೀಘ್ರಂ ಯಯೌ ರಾಘವಸನ್ನಿಧಿಮ್ ॥೫೫॥
ತತ್ರ ರಾಮಂ ಸಸುಗ್ರೀವಂ ಲಕ್ಷ್ಮಣಂ ಚ ದದರ್ಶ ಹ ।
ಕೃತ್ವಾ ಪ್ರದಕ್ಷಿಣಂ ರಾಮಂ ಪ್ರಣಮ್ಯ ಬಹುಶಃ ಸುಧೀಃ ॥೫೬॥
ಆಹ ಗದ್ಗದಯಾ ವಾಚಾ ರೋಮಾಂಚಿತತನೂರುಹಾ ॥

೫೪-೫೬. "ಎಲೈ ವಾನರರೆ, ರಾಮನನ್ನು ನೋಡುವದಕ್ಕಾಗಿ ಜಾಗ್ರತೆಯಾಗಿ ನಾನು ಇಲ್ಲಿಂದ ಹೊರಡಲಿಚ್ಛಿಸುವೆನು ; ನೀವುಗಳು ಕಣ್ಣುಗಳನ್ನು ಮುಚ್ಚಿಕೊಳ್ಳಿರಿ. ಗುಹೆಯ ಹೊರಕ್ಕೆ ಹೋಗಲಿರುವಿರಿ" ಎಂದಳು. ಅವರೆಲ್ಲರೂ ಹಾಗೆಯೇ ಮಾಡಿದರು. ಜಾಗ್ರತೆಯಾಗಿ ಹಿಂದೆ ತಾವು ಇದ್ದಂಥ ಕಾಡಿಗೇ ಬಂದವರಾದರು. ಆಕೆಯೂ ಕೂಡಲೆ ಗುಹೆಯನ್ನು ಬಿಟ್ಟವಳಾಗಿ ರಾಮನ ಹತ್ತಿರಕ್ಕೆ ಬಂದಳು. ಅಲ್ಲಿ ಸುಗ್ರೀವಸಹಿತನಾದ ರಾಮನನ್ನೂ ಲಕ್ಷ್ಮಣನನ್ನೂ ಕಂಡಳು. ಪ್ರದಕ್ಷಿಣೆಯನ್ನು ಮಾಡಿ ಬಹಳವಾಗಿ ನಮಸ್ಕರಿಸಿ ಜಾಣಳಾದ ಆಕೆಯು ಮೈಪುಲಕವುಳ್ಳವಳಾಗಿ ಗದ್ಗದವಾದ ಮಾತುಗಳಿಂದ ಹೀಗೆಂದಳು:

ದಾಸೀ ತವಾಹಂ ರಾಜೇಂದ್ರ ದರ್ಶನಾರ್ಥಮಿಹಾಗತಾ ।
ಬಹುವರ್ಷಸಹಸ್ರಾಣಿ ತಪ್ತಂ ಮೇ ದುಶ್ಚರಂ ತಪಃ ॥೫೭॥
ಗುಹಾಯಾಂ ದರ್ಶನಾರ್ಥಂ ತೇ ಫಲಿತಂ ಮೇಽದ್ಯ ತತ್ತಪಃ ।
ಅದ್ಯ ಹಿ ತ್ವಾಂ ನಮಸ್ಯಾಮಿ ಮಾಯಾಯಾಃ ಪರತಃ ಸ್ಥಿತಮ್ ॥೫೮॥
ಸರ್ವಭೂತೇಷು ಚಾಲಕ್ಷ್ಯಂ ಬಹಿರಂತರವಸ್ಥಿತಮ್ ।
ಯೋಗಮಾಯಾಜವನಿಕಾಚ್ಛನ್ನೋ ಮಾನುಷವಿಗ್ರಹಃ ॥೫೯॥
ನ ಲಕ್ಷ್ಯಸೇಽಜ್ಞಾನದೃಶಾಂ ಶೈಲೂಷ ಇವ ರೂಪಧೃಕ್ ।

೫೭-೫೯. 'ಎಲೈ ರಾಜೇಂದ್ರನೆ, ನಿನ್ನ ದಾಸಿಯಾದ ನಾನು ನಿನ್ನನ್ನು ಕಾಣುವದಕ್ಕಾಗಿ ಇಲ್ಲಿಗೆ ಬಂದಿರುವೆನು. ನಿನ್ನ ದರ್ಶನಕ್ಕೆಂದೇ ಗುಹೆಯಲ್ಲಿ ಕುಳಿತವಳಾಗಿ ನಾನು ಅನೇಕ ವರ್ಷಗಳ ಕಾಲ ಕಠಿನವಾದ ತಪಸ್ಸನ್ನು ಮಾಡಿದೆನು. ಈಗ ನನ್ನ ತಪಸ್ಸು ಸಾರ್ಥಕವಾಯಿತು. ಮಾಯೆಯಿಂದ ಆಚೆಗಿರುವ ಹಾಗೂ ಎಲ್ಲಾ ಪ್ರಾಣಿಗಳಲ್ಲಿಯೂ ಗೂಢನಾಗಿದ್ದುಕೊಂಡಿರುವ, ಒಳಗೂ ಹೊರಗೂ ಎಲ್ಲೆಲ್ಲಿಯೂ ವ್ಯಾಪ್ತನಾಗಿರುವ ನಿನ್ನನ್ನು ಈಗ ನಮಸ್ಕರಿಸುವೆನು. ನೀನು ಯೋಗಮಾಯೆಯೆಂಬ ತೆರೆಯಿಂದ ಮುಚ್ಚಲ್ಪಟ್ಟವನಾಗಿದ್ದು ಮನುಷ್ಯರೂಪದಿಂದ ತೋರಿಕೊಳ್ಳುತ್ತಿರುವೆ. ನಟನಂತೆ ವೇಷಧಾರಿಯಾದ ನೀನು ಅಜ್ಞಾನಿಗಳ ಕಣ್ಣಿಗೆ ಕಂಡುಬರುವವನಾಗಿಲ್ಲ'.

ಮಹಾಭಾಗವತಾನಾಂ ತ್ವಂ ಭಕ್ತಿಯೋಗವಿಧಿತ್ಸಯಾ ।
ಅವತೀರ್ಣೋಽಸಿ ಭಗವನ್ ಕಥಂ ಜಾನಾಮಿ ತಾಮಸೀ ॥೬೦॥
ಲೋಕೇ ಜಾನಾತು ಯಃ ಕಶ್ಚಿತ್ ತವ ತತ್ತ್ವಂ ರಘೂತ್ತಮ ।
ಮಮೈತದೇವ ರೂಪಂ ತೇ ಸದಾ ಭಾತು ಹೃದಾಲಯೇ ॥೬೧॥
ರಾಮ ತೇ ಪಾದಯುಗಲಂ ದರ್ಶಿತಂ ಮೋಕ್ಷದರ್ಶನಮ್ ।
ಅದರ್ಶನಂ ಭವಾರ್ಣಾನಾಂ ಸನ್ಮಾರ್ಗಪರಿದರ್ಶನಮ್ ॥೬೨॥

೬೦-೬೨. 'ಎಲೈ ಭಗವಂತನೆ, ನೀನು ಮಹಾಭಾಗವತರುಗಳಿಗೆ ಭಕ್ತಿಯೋಗವನ್ನು ಉಪದೇಶಿಸುವದಕ್ಕಾಗಿ ಅವತಾರಮಾಡಿರುತ್ತೀಯೆ. ತಾಮಸಗುಣವಿಶಿಷ್ಟಳಾದ ನಾನು ಹೇಗೆ ತಾನೆ ನಿನ್ನನ್ನು ಅರಿತೇನು? ಎಲೈ ರಘುಶ್ರೇಷ್ಠನೆ, ಲೋಕದಲ್ಲಿ ಯಾವನೋ ಒಬ್ಬನು ನಿನ್ನ ನಿಜತತ್ತ್ವವನ್ನು ಬೇಕಾದರೆ ಕಂಡುಕೊಳ್ಳಲಿ. ನನಗಾದರೊ, ಈ ಎದುರಿಗೆ ಇರುವ ರೂಪವೇ ಯಾವಾಗಲೂ ಹೃದಯದಲ್ಲಿ ಸ್ಫುರಿಸುತ್ತಿರಲಿ! ಎಲೈ ರಾಮನೆ, ಮೋಕ್ಷವನ್ನು ತೋರಿಸುವ ನಿನ್ನ ಎರಡು ಪಾದಾರವಿಂದಗಳು ಸಂಸಾರಸಮುದ್ರದ ದರ್ಶನವನ್ನು ಕಳೆಯತಕ್ಕವಾಗಿಯೂ ಒಳ್ಳೆಯ ಮಾರ್ಗವನ್ನು ತೋರತಕ್ಕವಾಗಿಯೂ ಇವೆ. ಇವುಗಳನ್ನು ನಾನು ಕಂಡೆನು.

ಧನಪುತ್ರಕಲತ್ರಾದಿವಿಭೂತಿಪರಿವರ್ಜಿತಃ ।
ಅಕಿಂಚನಧನಂ ತ್ವಾದ್ಯ ನಾಭಿಧಾತುಂ ಜನೋಽರ್ಹತಿ ॥೬೩॥
ನಿವೃತ್ತಗುಣಮಾರ್ಗಾಯ ನಿಷ್ಕಿಂಚನಧನಾಯ ತೇ ।
ನಮಃ ಸ್ವಾತ್ಮಾಭಿರಾಮಾಯ ನಿರ್ಗುಣಾಯ ಗುಣಾತ್ಮನೇ ॥೬೪॥
ಕಾಲರೂಪಿಣಮೀಶಾನಮಾದಿಮಧ್ಯಾಂತವರ್ಜಿತಮ್ ।
ಸಮಂ ಚರಂತಂ ಸರ್ವತ್ರ ಮನ್ಯೇ ತ್ವಾಂ ಪುರುಷೋತ್ತಮಮ್ ॥೬೫॥

೬೩-೬೫. ಹಣ, ಮಗ, ಹೆಂಡತಿ-ಮುಂತಾದ ವೈಭವಗಳಿಂದ ಕೊಬ್ಬಿಹೋಗಿರುವ ಪ್ರಾಕೃತನು ಸಂನ್ಯಾಸಿಗಳಿಗೆ ಸರ್ವಸ್ವನಾಗಿರುವ ನಿನ್ನ (ನಾಮವನ್ನು) ಹೇಳಲು ಕೂಡ ಯೋಗ್ಯನಾಗಲಾರನು. ನಿಷ್ಕಿಂಚನರಾದ ತ್ಯಾಗಿಗಳಿಗೆ ಧನರೂಪನಾದ, ಗುಣಗಳ ಪ್ರವೃತ್ತಿಗಿಂತ ಹಿಂದಕ್ಕೆ ಇರುವ ತನ್ನಲ್ಲೇ ತಾನೇ ಆನಂದರೂಪನಾಗಿದ್ದುಕೊಂಡಿರುವ (ಉಪಾಧಿಗಳಿಂದ) ಗುಣಾತ್ಮಕನೂ (ಸ್ವತಃ) ನಿರ್ಗುಣನೂ ಆಗಿರುವ ನಿನಗೆ ನಮಸ್ಕಾರಗಳು. ಎಲ್ಲಕ್ಕೂ ಒಡೆಯನೂ ಕಾಲರೂಪನೂ ಮೊದಲುಕೊನೆಗಳಿಲ್ಲದವನೂ ಎಲ್ಲೆಲ್ಲೂ ಸಮನಾಗಿರುವವನೂ ಆಗಿ ಸಂಚರಿಸುತ್ತಿರುವ ನಿನ್ನನ್ನು ನಾನು ಪುರುಷೋತ್ತಮನೆಂದೇ ತಿಳಿದಿರುತ್ತೇನೆ.

ದೇವ ತೇ ಚೇಷ್ಟಿತಂ ಕಶ್ಚಿತ್ ನ ವೇದ ನೃವಿಡಂಬನಮ್ ।
ನ ತೇಽಸ್ತಿ ಕಶ್ಚಿದ್ದಯಿತೋ ದ್ವೇಷ್ಯೋ ವಾ ಪರ ಏವ ಚ ॥೬೬॥

## ಅಧ್ಯಾತ್ಮಪ್ರಕಾಶಕಾರ್ಯಾಲಯ, ಬೆಂಗಳೂರುಶಾಖೆ,

ನಂ. 68, ೨ನೇ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು-560028

**1982ನೇ ನವೆಂಬರ್ ಮಾಹೆಯಲ್ಲಿ ನಡೆಯುವ**

## ವಿಶೇಷ ಉಪನ್ಯಾಸಗಳು

1. 6-11-82 ನೇ ಶನಿವಾರ ಸಾಯಂಕಾಲ 5 ರಿಂದ ಪಂಡಿತ್ ಶಾಂತಾ ನಂದಜಿಯವರಿಂದ "ದೈವಾನುಗ್ರಹ"

2. 7-11-82 ನೇ ಭಾನುವಾರ ಸಾಯಂಕಾಲ 5 ರಿಂದ ಡಾ|| ಕೆ.ಎಸ್. ನಾಗರಾಜನ್ M.A.,Phd. ರವರಿಂದ "ವಿವೇಕಚೂಡಾಮಣಿ"

3. 13-11-82 ನೇ ಶನಿವಾರ ಸಾಯಂಕಾಲ 5 ರಿಂದ ಡಾ|| ಎಂ.ಕೆ. ಭಾರತೀರಮಣಾಚಾರ್ಯರು, M.A.,Phd. ರವರಿಂದ "ಅವತಾರ"

4. 14-11-82 ನೇ ಭಾನುವಾರ ಸಾಯಂಕಾಲ 5 ರಿಂದ ವೇ|| ಕೆ. ಜಿ. ಸುಬ್ರಾಯಶರ್ಮರಿಂದ "ಗೀತೋಕ್ತಜ್ಞಾನಸ್ವರೂಪ"

5. 20-11-82 ನೇ ಶನಿವಾರ ಸಾಯಂಕಾಲ 5 ರಿಂದ ವಿದ್ವಾನ್ ಹೆಚ್. ಎಸ್. ವರದದೇಶಿಕಾಚಾರ್ಯರವರು, M.A.,Phd. ರವರಿಂದ "ಸಂಸ್ಕಾರಗಳು"

6. 21-11-82 ನೇ ಭಾನುವಾರ ಸಾಯಂಕಾಲ 5 ರಿಂದ ಡಾ|| ಎನ್. ಎಸ್.ಅನಂತರಂಗಾಚಾರ್ M.A.,Phd. ರವರಿಂದ "ಪುರುಷಾರ್ಥಸ್ವರೂಪ"

7. 27-11-82 ನೇ ಶನಿವಾರ ಸಾಯಂಕಾಲ 4-30 ರಿಂದ ಗಮಕ ವಿದುಷಿ, ಸರೋಜಮ್ಮ ಮತ್ತು ವೃಂದದವರಿಂದ "ಅಧ್ಯಾತ್ಮಗೀತಾವಳಿ" ರೂಪಕ, ಶ್ರೀ|| ಡಿ.ಸಿ. ಅನಂತರಾಮಯ್ಯನವರಿಂದ ವ್ಯಾಖ್ಯಾನ.

8. 28-11-82 ನೇ ಭಾನುವಾರ ಸಾಯಂಕಾಲ 5 ರಿಂದ ಪ್ರೊ. ಎಸ್.ಕೆ. ರಾಮಚಂದ್ರರಾವ್,M.A., ರವರಿಂದ "ದರ್ಶನಗಳು"- ಭಾಗ-೨.

ಸರ್ವರಿಗೂ ಆದರದ ಸುಸ್ವಾಗತ.

ಬೆಂಗಳೂರು-560028
ತಾ|| 1-11-82.

ಕೆ. ಜಿ. ಸುಬ್ರಾಯಶರ್ಮ,
ಕಾರ್ಯದರ್ಶಿ.

ADHYATMA-PRAKASHA Regd. No. KRN-I-5

Registered with the Registrar of News-papers
for India under No. R. N. 13244/57

## ಕೇಳಿರಿ

ಓಂಕಾರವು ವಾಕ್ಕೆಲ್ಲದರ ಸಾರವಾದ್ದರಿಂದಲೇ ಪ್ರತಿಯೊಂದು ಮಂತ್ರವೂ ಓಂಕಾರದಿಂದಲೇ ಆರಂಭವಾಗುತ್ತದೆ. ಮಾತಿನ ಪ್ರಪಂಚವೆಲ್ಲವೂ ಇದರಲ್ಲಿ ಅಡಕವಾಗಿದೆ. ಅನೇಕರೀತಿಯ ವೈದಿಕ-ಲೌಕಿಕವ್ಯವಹಾರಗಳಲ್ಲಿ ಕೂಡ ಓಂ ಎಂಬಿದನ್ನು ಮಧ್ಯಮವಾಗಿ ಉಪಯೋಗಿಸುವರು. ಓಂಕಾರದ ಮೂಲಕ ಪರಾಪರಬ್ರಹ್ಮಗಳ ಪ್ರಾಪ್ತಿಗೆ ಸಾಧಕನು ಪ್ರಯತ್ನಿಸಬೇಕಾಗಿದೆ. ಎಲೆಯು ತನ್ನ ನಾರಿನೊಳಗೆ ಅಡಕವಾಗಿರುವಂತೆ ವಾಕ್ಕೆಂಬುದೆಲ್ಲವೂ ಓಂಕಾರದಲ್ಲಿ ಒಂದಾಗಿದೆ. ಹೀಗೆಂದು ಚಿಂತಿಸುವದೇ ಓಂಕಾರೋಪಾಸನೆಯಾಗಿರುತ್ತದೆ.

To.
Sri




M 414 Sri J. Sreenivasa
Murthy, No. 18, II Cross
Kodanda Rampuram
P.O. BANGALORE-3

Edited Printed & Published by H. S. Lakshminarasimha Murthy
as Secretary for The Adhyatma Prakasha Karyalaya,
At The Adhyatma Prakasha Press, Holenarsipur - 573211
6-11-1982.